# ವಾನಸಿ

ತಿಂಗಳ ಪತ್ರಿಕೆ

ಮೇ 1993

★ ಜಾಹಿರಾತು ಮತ್ತು ಮಹಿಳೆ

★ ಸ್ತ್ರೀ ಸಂಬಂಧಿತ ಅಧ್ಯಯನಗಳು :
ಧೃವೀಕೃತ ವಿಶ್ಲೇಷಣೆಯ ಗೊಂದಲ

★ ಚಕ್ರ

★ ಬರಬೇಕು ಹೀಗೆ

★ ಡಾ|| ಆನಂದಿಬಾಯಿ ಪ್ರಸಾದ್–ಒಂದು ಸ್ಮರಣೆ

# ಮಾನಸ

ತಿಂಗಳ ಪತ್ರಿಕೆ

ಸಂಪುಟ : ೭ ಸಂಚಿಕೆ : ೪

ಮೇ - ೧೯೯೩





ವಿಳಾಸ :

**"ಮಾನಸ"** ತಿಂಗಳ ಪತ್ರಿಕೆ
ಪಂಚಾಯಿತಿ ರಸ್ತೆ
ಕಾಡುಗೋಡಿ ಪೋಸ್ಟ್
ಬೆಂಗಳೂರು–560 067

**ಸಂಪರ್ಕ ವಿಳಾಸ**
ನಂ–457. 12ನೇ ಅಡ್ಡರಸ್ತೆ
ಪಶ್ಚಿಮ ಕಾರ್ಡ್‌ರಸ್ತೆ, 2ನೆ ಹಂತ
ಮಹಾಲಕ್ಷ್ಮಿಪುರ, ಬೆಂಗಳೂರು-560 086

ಬಿಡಿ ಪ್ರತಿ : **3-00 ರೂ.**

ಸೂಚನೆ : ವಾರ್ಷಿಕ ಚಂದಾ : **25 ರೂ.**
ಆಜೀವ ಚಂದಾ : **300 ರೂ.**

ಒಂದು ವಿಶೇಷ ಸಂಚಿಕೆಯೊಂದಿಗೆ
ಒಟ್ಟು ಹನ್ನೊಂದು ಸಂಚಿಕೆಗಳು.

ಬ್ಯಾಂಕ್ ಡ್ರಾಫ್ಟ್, ಎಂ.ಓ. ಗಳನ್ನು ಸಂಪರ್ಕ
ವಿಳಾಸಕ್ಕೆ ಕಳಿಸಿಕೊಡಬೇಕಾಗಿ ಕೋರಿದೆ.


**ಈ ಸಂಚಿಕೆಯಲ್ಲಿ...**




ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು : ಮಾನವಿ ಮುದ್ರಣಾಲಯ
ಪಂಚಾಯಿತಿ ರಸ್ತೆ, ಕಾಡುಗೋಡಿ ಅಂಚೆ, ಬೆಂಗಳೂರು-೫೬೦ ೦೬೭



# ಸಂಪಾದಕೀಯ

ಮೇ ಒಂದು ಕಾರ್ಮಿಕರ ದಿನಾಚರಣೆ, ಜಗತ್ತಿನಾದ್ಯಂತ ಕಾರ್ಮಿಕರು ಸಂಘಟಿತರಾಗಿ ತಮ್ಮನ್ನು ಬಿಗಿದ ಸಂಕೋಲೆಗಳನ್ನು ಕಿತ್ತೊಗೆಯುವ ಐತಿಹಾಸಿಕವಾದ ಸಾಂಕೇತಿಕ ದಿನ. ಈ ಸಂದರ್ಭದಲ್ಲಿ ಕರ್ನಾಟಕ ಸರ್ಕಾರವು ಅಸಂಘಟಿತ ಕಾರ್ಮಿಕರ ಸಮಸ್ಯೆಗಳನ್ನು ಚರ್ಚಿಸಲು ಉನ್ನತ ಮಟ್ಟದ ಅಧ್ಯಯನ ಸಮಿತಿಯನ್ನು ನೇಮಕ ಮಾಡಲು ನಿರ್ಧರಿಸಿರುವುದು ಸ್ವಾಗತಾರ್ಹವಾದರೂ, ಸಮಿತಿಯು ನೀಡುವ ವರದಿಯನ್ನು ಸರ್ಕಾರ ಎಷ್ಟು ಗಂಭೀರವಾಗಿ ತೆಗೆದುಕೊಳ್ಳುವುದು ಎಂಬ ಪ್ರಶ್ನೆ ಉಂಟಾಗುವುದು ಸಹಜವೆ ?

ಅಸಂಘಟಿತ ಕಾರ್ಮಿಕರಲ್ಲಿ ಮಹಿಳಾ ಅಸಂಘಟಿತ ಕಾರ್ಮಿಕರ ಸಮಸ್ಯೆಗಳು ತೀರಾ ಸಂಕೀರ್ಣವಾದವು. ಖಾಸಗೀ ಕಾರ್ಖಾನೆಗಳಲ್ಲಿ ದುಡಿಯುವ ಮಹಿಳೆಯರು ಕೆಲಸದ ಅಭದ್ರತೆ, ಅಸಮಾನವೇತನ, ಆರು ತಿಂಗಳಿಗೊಮ್ಮೆ ಸರ್ವೀಸ್ ಕಡಿತಗೊಳಿಸುವುದು, ಮದುವೆಯಾಗದ ಸ್ತ್ರೀಯರಿಗೆ ಆದ್ಯತೆ ನೀಡುವುದು, ಇತರೇ ಸೌಲಭ್ಯಗಳಿಂದ ವಂಚನೆ, ಸಂಘಟಿತರಾಗಲು ಪ್ರಯತ್ನಿಸಿದಾಗ ಕೆಲಸದಿಂದ ತೆಗೆದುಹಾಕುವುದು, ಕನಿಷ್ಠ ವೇತನವನ್ನು ನೀಡದಿರುವುದು ಮುಂತಾದ ಸಮಸ್ಯೆಗಳಿಂದ ಈ ಮಹಿಳೆಯರು ನರಳುತ್ತಿದ್ದಾರೆ.

ನಮ್ಮ ದೇಶದಲ್ಲಿ ಶೇ 83ರಷ್ಟು ಮಹಿಳೆಯರು ಗ್ರಾಮೀಣ ಪರಿಸರದಲ್ಲಿ, ಹೊಲಗದ್ದೆಗಳಲ್ಲಿ ದುಡಿಯುತ್ತಿದ್ದಾರೆ. ವ್ಯವಸಾಯ, ಹೈನುಗಾರಿಕೆ, ರೇಷ್ಮೆ, ಮುಂತಾದ ಕೆಲಸದಲ್ಲಿ ತೊಡಗಿರುವ ಗ್ರಾಮೀಣ ಮಹಿಳೆಯರ ದುಡಿಮೆ ಅಗೋಚರವಾದದು. ಮನೆಗೆಲಸ ಮಾಡುವ ಹಾಗೂ ವಸ್ತುಗಳ ಬಿಡಿ ಭಾಗಗಳನ್ನು ಮನೆಯಲ್ಲಿ, ಜೋಡಿಸುವ, ಅಗರಬತ್ತಿ, ಹಪ್ಪಳ ಮಾಡುವ ಮಹಿಳೆಯರು ಎದುರಿಸುವ ಸಮಸ್ಯೆಗಳು ಹಲವಾರು. ಅಧ್ಯಯನವೊಂದರ ಪ್ರಕಾರ, 20 ಪೈಸೆಯಿಂದ 2 ರೂ.ಗಳವರೆಗೆ ಪಡೆಯುವ ಮಹಿಳೆಯರು ಇದ್ದಾರೆ. ಇವುಗಳ ಜೊತೆಗೆ ಮನೆಗೆಲಸ, ಮಕ್ಕಳ ಲಾಲನೆ-ಪಾಲನೆಯ ಹೊರೆ ಈ ಮಹಿಳಾ ಕಾರ್ಮಿಕರ ಮೇಲಿದೆ.

ಸರ್ಕಾರ ಈ ಅಂಶಗಳತ್ತ ಕಣ್ಣು ತೆರೆಯುವುದು ಮಾತ್ರವಲ್ಲ, ಇವುಗಳಿಗೆ ಸೂಕ್ತ ಪರಿಹಾರವನ್ನು ಕೈಗೊಳ್ಳುವತ್ತ ಹೆಜ್ಜೆ ಇಡಬೇಕಾಗಿದೆ. ಕಾರ್ಮಿಕ ಸಂಘಟನೆಗಳು, ಮಹಿಳಾ ಸಂಘಟನೆಗಳು, ಅಸಂಘಟಿತ ಮಹಿಳೆಯರ ಹಾಗೂ ಅವರ ವಿಶಿಷ್ಟ ಸಮಸ್ಯೆಗಳತ್ತ ಗಮನ ಹರಿಸಿದರೆ, ಮೇ ದಿನಾಚರಣೆಗೆ ಒಂದು ಅರ್ಥ ದೊರಕೀತು.

# ಜಾಹೀರಾತು ಮತ್ತು ಮಹಿಳೆ

ರಾಜೇಶ್ವರಿ ಎಚ್. ಎಸ್.

ತಾವು ಉತ್ಪಾದಿಸುವ ವಸ್ತುಗಳಿಗೆ ಮಾರುಕಟ್ಟೆಯನ್ನು ಸೃಷ್ಟಿಸಿಕೊಳ್ಳಲು ಹಾಗೂ ಇತರ ವಸ್ತುಗಳ ಜೊತೆಗೆ ಪೈಪೋಟಿ ನಡೆಸಲು ವಾಣಿಜ್ಯ ಕಂಪನಿಗಳು ಸಮಾಜದಲ್ಲಿ ಸ್ತ್ರೀಯರ ಬಗ್ಗೆ ಚಾಲ್ತಿಯಲ್ಲಿರುವ ಪಕ್ಷಪಾತ ಮೌಲ್ಯಗಳನ್ನು ಅವಲಂಭಿಸುತ್ತವೆ. ತಮ್ಮ ವಸ್ತುಗಳನ್ನು ಮಾರಾಟ ಮಾಡುವುದರ ಜೊತೆಗೆ ಇಂತಹ ಮೌಲ್ಯಗಳನ್ನು ಸಮಾಜದಲ್ಲಿ ಬಲವಾಗಿ ಬೇರೂರುವಂತೆ ಪ್ರೇರೇಪಿಸುತ್ತವೆ.

ಸಮೂಹ ಮಾಧ್ಯಮಗಳು ಇತರ ಎಲ್ಲಾ ಮಾಧ್ಯಮಗಳಿಗಿಂತ ಪ್ರಬಲವಾದವುಗಳು ಮತ್ತು ಶಕ್ತಿಯುತವಾದವು. ಇಂದಿನ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಸಂದರ್ಭದಲ್ಲಿ ಇಂತಹ ಮಾಧ್ಯಮಗಳು ವ್ಯಕ್ತಿಗತವಾಗಿ ಹಾಗೂ ಸಮುದಾಯಿಕವಾಗಿ ಎಂತಹ ಸಾಮಾಜಿಕ ಹಾಗೂ ಸಾಂಸ್ಕೃತಿಕ ಮೌಲ್ಯಗಳನ್ನು ಸೃಷ್ಟಿಸುತ್ತಿವೆ ? ಇವು ಧನಾತ್ಮಕ ಪ್ರಭಾವವನ್ನು ಬೀರುತ್ತಿವೆಯೆ? ಅಥವಾ ನೇತ್ಯಾತ್ಮಕ ಪ್ರಭಾವವನ್ನು ಬೀರುತ್ತಿವೆಯೇ ? ಇಂತಹ ಮಾಧ್ಯಮಗಳಿಗೂ ಸ್ತ್ರೀಯರಿಗೂ ಇರುವ ಸಂಬಂಧವೇನು ? ಇಂತಹ ಪ್ರಶ್ನೆಗಳನ್ನು ಪರೀಕ್ಷಿಸುವುದು ತುಂಬಾ ಮುಖ್ಯವಾಗುತ್ತವೆ.

ಸಮೂಹ ಮಾಧ್ಯಮಗಳು ಅವುಗಳ ಪ್ರಭಾವವನ್ನು ವಿಶ್ಲೇಷಿಸುವಲ್ಲಿ ಹಾಗೂ ವ್ಯಾಖ್ಯಾನಿಸುವಲ್ಲಿ ಎರಡು ಪ್ರಮುಖ ತಾತ್ವಿಕ ವಾದಗಳು ಪ್ರಚಲಿತವಿರುವುದನ್ನು ನಾವು ಕಾಣಬಹುದು. ಒಂದು ವಾದವು 'ಸಮೂಹ ಮಾಧ್ಯಮಗಳು ಅತಿ ಪ್ರಭಾವಿತವಾದವು. ಇವು ಜನಸಾಮಾನ್ಯರ ಮೌಲ್ಯಗಳನ್ನು ಸಂಪೂರ್ಣವಾಗಿ ಬದಲಾವಣೆ ಮಾಡಬಲ್ಲವು. ಇವು ಸಮಾಜದ ಒಂದು ಪ್ರತಿಬಿಂಬ, ಕನ್ನಡಿಯಂತೆ. ಇವುಗಳನ್ನು ಹಾಗೂ ಅವುಗಳ ಪ್ರಭಾವವನ್ನು ಧನಾತ್ಮಕವಾಗಿ ನೋಡಬೇಕಾಗುತ್ತದೆ. ಸಮೂಹ ಮಾಧ್ಯಮಗಳು ಹೊಸ ಮೌಲ್ಯಗಳನ್ನು ಸೃಷ್ಟಿಸುವಲ್ಲಿ ಪೂರಕವಾದ ಪಾತ್ರವನ್ನು ವಹಿಸಬಲ್ಲವು ಎಂಬ ಅಂಶವನ್ನು ಗಮನಿಸಲೇಬೇಕಾಗುತ್ತದೆಯೆಂದು ಈ ವಾದ ಬಲವಾಗಿ ನಂಬುತ್ತದೆ.

ಎರಡನೆಯವಾದದ ಪ್ರಕಾರ ಸಮೂಹ ಮಾಧ್ಯಮಗಳು ಕೇವಲ ಸರ್ಕಾರದ, ಆಳುವ ವರ್ಗದ ಏಜೆಂಟುಗಳು ಮಾತ್ರ. ಇವು ಎಲ್ಲಾ ಸಂದರ್ಭಗಳಲ್ಲಿಯೂ ಆಳುವ ವರ್ಗದ ಹಿತಾಸಕ್ತಿಯನ್ನು ರಕ್ಷಿಸುವ ಕಾರ್ಯನಿರ್ವಹಿಸುತ್ತವೆ. ಈ ಸಮೂಹ ಮಾಧ್ಯಮಗಳು ಸ್ವತಂತ್ರವಾದುವುಗಳಲ್ಲ. ಆಳುವ ವರ್ಗದ ಹಿತಾಸಕ್ತಿಯನ್ನು ಬಿಟ್ಟು ಇವು ಬೇರೆ ಏನನ್ನು ಪ್ರತಿಬಿಂಬಿಸಲಾರವು. ಮೂಲಭೂತವಾಗಿ ಈ ವಾದವು ಸಮೂಹ ಮಾಧ್ಯಮಗಳನ್ನು ಪ್ರಚಾರ ಮಾಧ್ಯಮಗಳೆಂದು ಪರಿಗಣಿಸುತ್ತದೆ.

ಈ ಎರಡು ವಾದಗಳು ಸಮೂಹ ಮಾಧ್ಯಮಗಳನ್ನು ಬೇರೆ ಬೇರೆ ಸೈದ್ಧಾಂತಿಕ ನೆಲೆಯಿಂದ ನೋಡುತ್ತಿವೆಯಾದರೂ, ಸಮೂಹ ಮಾಧ್ಯಮಗಳು ಜನ ಸಮುದಾಯದ ಮೇಲೆ ಬೀರುವ ಪರಿಣಾಮಗಳನ್ನು ವಿಶ್ಲೇಷಿಸುವಲ್ಲಿ ಒಂದೆಡೆ ಸೇರುತ್ತವೆ.

ಸಮಾಜದಲ್ಲಿನ ಪ್ರಬಲವಾದ ಶಕ್ತಿ ಗುಂಪುಗಳು ಸಮಾಜದಲ್ಲಿನ ಸಂಪತ್ತು ಹಾಗೂ ಸಂಪನ್ಮೂಲಗಳನ್ನು ತಮ್ಮ ಹಿಡಿತದಲ್ಲಿ ಇಟ್ಟುಕೊಂಡಿರುತ್ತವೆ. ಈ ನಿಯಂತ್ರಣದಿಂದ ಸಮಾಜದಲ್ಲಿ ಬೇರೂರಿರುವ ಅಸಮಾನತೆಯನ್ನು ಮುಂದುವರಿಸಿಕೊಂಡು ಹೋಗಲು ಸಾಧ್ಯವಾಗುತ್ತದೆ. ಸಮೂಹ ಮಾಧ್ಯಮಗಳು ಇತರ ಅಂಗಗಳಂತೆ ಈ ಪ್ರಬಲ ವರ್ಗದ ಹಿತಾಸಕ್ತಿಯ ತಾತ್ವಿಕ ಆಯುಧವಾಗಿ ಕೆಲಸಮಾಡುತ್ತವೆ.

ದೊಡ್ಡ ದೊಡ್ಡ ಬಂಡವಾಳಶಾಹಿಗಳು, ವಾಣಿಜ್ಯ ಕಂಪನಿಗಳು ಸಮೂಹ ಮಾಧ್ಯಮಗಳನ್ನು ತಮ್ಮ ನಿಯಂತ್ರಣದಲ್ಲಿ ಇಟ್ಟುಕೊಂಡಿರುತ್ತವೆ. ಇದರ ಪರಿಣಾಮವಾಗಿ, ಎಷ್ಟೋ ವಾಸ್ತವಿಕ ಅಂಶಗಳು, ಘಟನೆಗಳು, ಬೆಳಕಿಗೆ ಬರದೆ ಮುಚ್ಚಿಹೋಗುತ್ತವೆ.

ಸಮೂಹ ಮಾಧ್ಯಮಗಳು ಕೇವಲ ಸಮಾಜದಲ್ಲಿ ಪ್ರಚಲಿತವಿರುವ ಮೌಲ್ಯಗಳನ್ನು ಪ್ರತಿಬಿಂಬಿಸುವುದು ಮಾತ್ರವಲ್ಲದೆ, ಸೂಕ್ಷ್ಮವಾಗಿ ಹಾಗೂ ಪರೋಕ್ಷವಾಗಿ ಮೌಲ್ಯಗಳನ್ನು ರೂಪಿಸುವ ಪ್ರೇರಕವಾಗುತ್ತದೆ. ಸಮೂಹ ಮಾಧ್ಯಮಗಳು ಪ್ರಸ್ತುತದ ಸಾಮಾಜಿಕ ಪದ್ಧತಿಯನ್ನು ಬಲಪಡಿಸುವುದರ ಜೊತೆಗೆ ಅವುಗಳನ್ನು ನ್ಯಾಯ ಸಮ್ಮತ ಗೊಳಿಸುತ್ತದೆ. ಜನ ಸಾಮಾನ್ಯರ ಗಮನವನ್ನು ನೈಜ ವಾದ ಸಮಸ್ಯೆಯಿಂದ ದೂರ ಸೆಳೆದು ಭ್ರಮಾಲೋಕದಲ್ಲಿ ಬದುಕುವಂತೆ ಪ್ರೇರೇಪಿಸುತ್ತದೆ. ನಮ್ಮ ಮನಸ್ಸುಗಳು ಸಂಪೂರ್ಣವಾಗಿ ಅವುಗಳ ಪ್ರಭಾವಕ್ಕೆ ಒಳಗಾಗಿ ಅವುಗಳ ಆಯ್ಕೆಯೇ ನಮ್ಮ ಆಯ್ಕೆ ಎನ್ನುವಷ್ಟರ ಮಟ್ಟಿಗೆ ನಾವು ಪ್ರಭಾವಿತರಾಗುತ್ತೇವೆ.

ಸಮಾಜದಲ್ಲಿ ಅಸ್ತಿತ್ವದಲ್ಲಿರುವ ಮೌಲ್ಯಗಳ ಆಧಾರದ ಮೇಲೆ ತಮ್ಮ ಭದ್ರವಾದ ಬುನಾದಿಯನ್ನು ಹಾಕುತ್ತವೆ. ಅವುಗಳನ್ನು ಸಮೂಹ ಮಾಧ್ಯಮ ಅತಿಯಾಗಿ ವೈಭವೀ ಕರಿಸುತ್ತವೆ. ಅಥವಾ ಪ್ರತಿಬಿಂಬಿಸುತ್ತವೆ. ಈ ಪ್ರಕಿಯೆ ಯಲ್ಲಿ ಮೌಲ್ಯಗಳನ್ನು ಪುನಃ ಬಲಪಡಿಸುತ್ತವೆ. ಇಂತಹ ಪ್ರಬಲವಾದ ಸಮೂಹ ಮಾಧ್ಯಮಗಳಲ್ಲಿ ಜಾಹಿರಾತು, ಪತ್ರಿಕೆಗಳು, ಸಿನಿಮಾ, ಟಿ.ವಿ., ಜಾಹಿರಾತು ಅತಿ ಪ್ರಬಲ ವಾದ ಸಮೂಹ ಮಾಧ್ಯಮ.

## ಗೃಹೋಪಯೋಗಿ ವಸ್ತುಗಳ ಜಾಹಿರಾತಿನಲ್ಲಿ ಸ್ತ್ರೀ

ಸ್ತ್ರೀಯರ ಸೌಂದರ್ಯ, ಅವರು ಬಳಸುವ ಸೌಂದರ್ಯ ವರ್ಧಕಗಳಲ್ಲಿ, ಸ್ತ್ರೀಯರ ಉಡುಗೆ-ತೊಡುಗೆ, ಹೀಗೆ ಹಲ ವಾರು ಜಾಹಿರಾತುಗಳಲ್ಲಿ ಸ್ತ್ರೀತ್ವದ ಪರಿಕಲ್ಪನೆಯನ್ನು ಪಸರಿಸಲು ಪ್ರಯತ್ನಿಸಿದರೂ, ಇದು ಪರಿಪೂರ್ಣವಾಗು ವುದು ಸ್ತ್ರೀ ಮತ್ತು ಕುಟುಂಬದ ಸುತ್ತ ಗಿರಕಿ ಹೊಡೆ ಯುವ ಜಾಹಿರಾತುಗಳಲ್ಲಿ. ಗೃಹೋಪಯೋಗಿ ವಸ್ತುಗಳಿಗೆ ಸಂಬಂಧಪಟ್ಟ ನೇರವಾಗಿ ಅಡಿಗೆ ಮನೆಗೆ ಸಂಬಂಧಿಸಿದ ಜಾಹಿರಾತುಗಳಲ್ಲಿ ಸ್ತ್ರೀಯರನ್ನು ಬಳಸಿಕೊಳ್ಳುವುದರ ಜೊತೆಗೆ, ಅಧಿಕ ಸಂಖ್ಯೆಯಲ್ಲಿ ಸ್ತ್ರೀಯರನ್ನು ತಲು ಪುವುದೇ ಈ ಜಾಹಿರಾತುಗಳ ಮುಖ್ಯ ಉದ್ದೇಶ. ಮನೆ ಯಲ್ಲಿ ಇರುವ ಸ್ತ್ರೀಯೇ ಆಗಲಿ, ಹೊರಗೆ ದುಡಿಯುವ ಸ್ತ್ರೀಯೆ ಆಗಲಿ, ಅವಳ ಸ್ತ್ರೀತ್ವ ಪರಿಪೂರ್ಣತೆ ಅಭಿವ್ಯಕ್ತಿ ಯಾಗುವುದು ಅವಳ ಕೌಟುಂಬಿಕ ಜವಾಬ್ದಾರಿಗಳಲ್ಲಿ. ಸ್ತ್ರೀಯರು ಕುಟುಂಬದಲ್ಲಿ ನಿರ್ವಹಿಸ ಬೇಕಾದ ಬಗ್ಗೆ ಸಮಾಜದಲ್ಲಿ ಬೇರೂರಿರುವ ಮೌಲ್ಯಗಳನ್ನು ಜಾಹಿರಾತು ಗಳು ಬಲಪಡಿಸುತ್ತವೆ.

ಟಾಟಾರವರ ಉಪ್ಪಿನ ಪುಡಿಯ ಜಾಹಿರಾತನ್ನು ಗಮ ನಿಸಿ, ಮೂವರು ಮಹಿಳೆಯರನ್ನೊಳಗೊಂಡ ಈ ಜಾಹಿರಾತು ಮಹಿಳೆಯರಿಗೆ ಪರಿಣಾಮಕಾರಿಯಾಗಿ ಕಾಣಿಸುತ್ತದೆ. ನಿರ್ಲಿಪ್ ದೋಸೆ ಹೆಂಚು "ಹೆಂಗಸಿನ ಗುಟ್ಟನ್ನು ಹೆಂಗಸಿಗೆ ಹಂಚಿಕೊಳ್ಳುವುದು. ಸಾಂಬಾರು ಪುಡಿಯ ಜಾಹಿರಾತು, ತಾಯಿಗೂ-ಸಾಂಬಾರು ಪುಡಿಗೂ ಇರುವ ಸಂಬಂಧವನ್ನು ಸಮೀಕರಿಸುತ್ತದೆ. ಉಪ್ಪಿನ ಕಾಯಿ, ವಿವಿಧ ಸಾಂಬಾರು ಪುಡಿಗಳು, ಲಿಪ್ಟನ್ ಚಾ, ಮೌಂಟನ್ ಮಿಸ್ಟ ಟೀ, ಹೀಗೆ ಗೃಹೋಪಯೋಗಿ ವಸ್ತುಗಳ ಜಾಹಿರಾತುಗಳಲ್ಲಿ ಸ್ತ್ರೀಯರನ್ನು ಉಪಯೋ ಗಿಸಿ ಕೊಳ್ಳಲಾಗಿದೆ. ಕುಟುಂಬದವರ, ಮಕ್ಕಳ, ಪೌಷ್ಠಿ ಕತೆ, ಆರೋಗ್ಯವನ್ನು ಕಾಪಾಡುವುದು ಸ್ತ್ರೀಯರ ಜವಾ ಬ್ದಾರಿ. ಮಾತ್ರ ಮನೆಮಂದಿಯ ಆರೋಗ್ಯವನ್ನು ಕಾಪಾ ಡಲು, ಸ್ತ್ರೀಯಾದವಳು ಪೋಸ್ಟರ್ ಸೋಪನ್ನೆ ಬಳಸ ಬೇಕೆಂದು ಕರೆ ನೀಡಿದರೆ, ಮಕ್ಕಳಿಗೆ ಬೇಕಾದ ವಿವಿಧ ಆಹಾರ ಪದಾರ್ಥಗಳನ್ನು ಸ್ತ್ರೀಯಾದವಳು ಜವಾಬ್ದಾರಿ ಯಿಂದ ಆಯ್ಕೆಮಾಡ ಬೇಕೆಂದು ಕಿವಿಮಾತನ್ನು ಹೇಳು ತ್ತವೆ.

ಸ್ತ್ರೀಯೆಂದರೆ ಮನೆ, ಮನೆಯೆಂದರೆ ಸ್ತ್ರೀ ಎನ್ನುವ ಧೋರಣೆಯನ್ನು ಈ ಜಾಹಿರಾತುಗಳು ಒತ್ತಿ ಹೇಳುತ್ತವೆ. ಬಹಪಾಲು ಸೋಪುಗಳ ಜಾಹಿರಾತುಗಳಲ್ಲಿ ಬಟ್ಟೆ ಒಗೆಯುವ ಕೆಲಸ ಸ್ತ್ರೀಯರದೇ. ರಿನ್, ಏರಿಯಲ್, ನಿರ್ಮಾ, ಹೊಸ ಹಸಿರು ಏರಿಯಲ್, ಹೀಗೆ ಒಂದಕ್ಕೊಂದು ಪೈಪೋಟಿ ನಡೆಸುವ ಸೋಪುಗಳಿಗೆಲ್ಲಾ ಬಟ್ಟೆಯೊಗೆಯುವ ಸ್ತ್ರೀಯರು ಬೇಕೇಬೇಕು. ಸ್ತ್ರೀಯ ಪರಿಪೂರ್ಣತೆ, ಅಥವಾ ಸ್ತ್ರೀತ್ವ ಅವಳ ದೈಹಿಕ ಸೌಂದರ್ಯದಲ್ಲಿ ಅಡಗಿದೆ ಯೆಂಬ ಪ್ರಚಾರವನ್ನು ಒಂದು ಕಡೆ ಮಾಡಿದರೂ, ಇನ್ನೊಂದು ಕಡೆ, ಮನೆಗೆಲಸ, ಕುಟುಂಬದವರ ಜವಾ ಬ್ದಾರಿ, ಮಕ್ಕಳ ಆರೋಗ್ಯವನ್ನು ಕಾಪಾಡಿಕೊಂಡು ಹೋಗುವುದರಲ್ಲೇ ಸ್ತ್ರೀಯರ ಪರಿಪೂರ್ಣತೆ ಅಡಗಿದೆ ಯೆಂಬುದನ್ನು ಬಹುಪಾಲು ಜಾಹಿರಾತುಗಳು ಒತ್ತಿ ಹೇಳುತ್ತವೆ.

ಒಂದೇ ಕುಟುಂಬದಲ್ಲಿ ಬೆಳೆಯುವ ಹೆಣ್ಣುಮಗು ರೂಢಿಸಿಕೊಳ್ಳುವ ಮೌಲ್ಯಗಳಿಗಿಂತ ಭಿನ್ನವಾದ ಮೌಲ್ಯ

ಗಳನ್ನು ಗಂಡುಮಗು ಬೆಳೆಸಿಕೊಳ್ಳುತ್ತದೆ. ಹೆಣ್ಣು ಮಗು ತಾಯಿಯ ಪಾತ್ರದಲ್ಲಿ ತನ್ನ ಪ್ರತಿಬಿಂಬವನ್ನು ಕಂಡು ಕೊಳ್ಳಲು ಪ್ರಯತ್ನಿಸುವುದರ ಜೊತೆಗೆ ಮುಂದೆ ತಾನು ನಿರ್ವಹಿಸಬೇಕಾದ ಪಾತ್ರಕ್ಕೆ ನಾಂದಿ ಹಾಡುತ್ತದೆ. ಜಾಹಿರಾತುಗಳು ಇಂತಹ ಮೌಲ್ಯಗಳನ್ನು ಉಪಯೋಗಿಸಿಕೊಳ್ಳುವುದರ ಮೂಲಕ ಎಳೆಯ ಹೆಣ್ಣು ಮಕ್ಕಳಲ್ಲಿ ಮುಂದೆ ತಾವು ತಾಯಾಗಿ ನಿರ್ವಹಿಸಬೇಕಾದ ಪಾತ್ರದ ಬಗ್ಗೆ ಅಚ್ಚೊತ್ತುತ್ತವೆ, ಹಾಕಿನ್ಸ್ ಕುಕ್ಕರ್‌ನ ಜಾಹಿರಾತಿನಲ್ಲಿನ ಪುಟಾಣಿ ಹೆಣ್ಣುಮಗು "ಹೇಗಿದೆ ನನ್ನ ಪುಟಾಣಿ ಹಾಕಿನ್ಸ್ ಎಂದು ಹೆಮ್ಮೆಯಿಂದ ಬೀಗುತ್ತಾಳೆ"

ಮೌಲ್ಯಗಳು, ನಂಬಿಕೆಗಳು, ಧೋರಣೆಗಳು, ತಲೆತಲಾಂತರದಿಂದ ಹರಿದು ಬರುತ್ತಿವೆ. ಇವೇ ಮಾದರಿಯಲ್ಲಿ ವಾಣಿಜ್ಯ ಕಂಪನಿಗಳು ತಮ್ಮ ವಸ್ತುಗಳನ್ನು ಜಾಹಿರಾತುಗೊಳಿಸುತ್ತಿವೆ. ಗೋದ್ರೆಜ್ ಫ್ರಿಜ್‌ನ ಜಾಹಿರಾತಿನಲ್ಲಿ ತಾಯಿ ಮಗಳನ್ನು ಬೀಳ್ಕೊಡುವಾಗ "ಕೇವಲ ಹೆಂಡತಿಯಾಗಿದ್ದರೆ ಸಾಲದು, ಅದಕ್ಕಿಂತ ಹೆಚ್ಚಾಗಿ ಮನೆಯನ್ನು ಸೃಷ್ಟಿಸುವಂತವಳು ನೀನಾಗ ಬೇಕು" ಎಂದು ನುಡಿಯುತ್ತಾ, ಗೊದ್ರೆಜ್ ಫ್ರಿಜ್‌ನ್ನು ಕೊಡುಗೆಯಾಗಿ ನೀಡುತ್ತಾರೆ. ವುಡವರ್ಡ್ಸ್‌ನ ಜಾಹಿರಾತು ಇದೇ ಮಾದರಿಯಲ್ಲಿದೆ. ಮಗುವಿಗೆ ವುಡ್‌ವರ್ಡ್ಸ್‌ನ ಕೊಡುತ್ತಿದ್ದುದನ್ನೂ ಅಜ್ಜಿ ಮಗಳಿಗೆ, ಮಗಳು ಮೊಮ್ಮಳಿಗೆ, ನೆನವು ಮಾಡುತ್ತಾರೆ. ಫಿಲೋ ಫ್ರಿಜ್, ಅಂತರ ರಾಷ್ಟ್ರೀಯ ಮನೆಯ ಹೆಂಗಸರನ್ನು ಒಟ್ಟಿಗೆ ತರುತ್ತವೆ.

## ವಸ್ತುಗಳ ಮಾರಾಟಕ್ಕೆ ಸ್ತ್ರೀ

ಸ್ತ್ರೀಯರಿಗೆ ಸಂಬಂಧಪಡದ ವಸ್ತುಗಳ ಮಾರಾಟಕ್ಕೆ ಜಾಹೀರಾತುಗಳು ಸ್ತ್ರೀಯರನ್ನು ಉಪಯೋಗಿಸುವುದನ್ನು ವಿಪುಲವಾಗಿ ನೋಡಬಹುದು. ಸ್ತ್ರೀಯರಿಗೆ ಸಂಬಂಧಪಡೆದ ವಸ್ತುಗಳನ್ನು ಮಾರಾಟ ಮಾಡುವಾಗ, ವಸ್ತುಗಳನ್ನು ಸ್ತ್ರೀಯರೊಂದಿಗೆ ಸಮೀಕರಿಸಲಾಗುವುದು. ವಸ್ತುಗಳನ್ನು ಕೊಂಡುಕೊಳ್ಳುವ ಹಾಗೆ ಸ್ತ್ರೀಯರನ್ನು ವಸ್ತುಗಳನ್ನು ಉಪಯೋಗಿಸುವ ಹಾಗೆ ಸ್ತ್ರೀಯರನ್ನು ಉಪಯೋಗಿಸಿಕೊಳ್ಳಬಹುದೆಂಬ ಐಡಿಯಾವನ್ನು ವಸ್ತುವನ್ನು ಮಾರಾಟ ಮಾಡುವುದರ ಜೊತೆಗೆ ಮಾರಾಟ ಮಾಡಲಾಗುವುದು.

ಸೊಸೈಟಿ ಟೀಯ ಜಾಹಿರಾತನ್ನು ನೋಡಿ. ಕೌಬಾಯ್ ರೀತಿಯ ಸ್ತ್ರೀಯೊಬ್ಬಳು ಸೊಸೈಟಿ ಟೀಯನ್ನು ಕುಡಿಯುತ್ತಿರುವುದು, ರೆನಾಲ್ಡ್ ಪೆನ್ ಇರುವುದು ಅಂತರ ರಾಷ್ಟ್ರೀಯ ಮಹಿಳೆಯರಿಗೆಂದು ಜಾಹೀರಾತುಪಡಿಸುತ್ತದೆ. ಟ್ರೆಂಡ್ ಸೂಟಿಂಗ್‌ನ ಜಾಹಿರಾತಿನಲ್ಲಿ ಸ್ತ್ರೀಯೊಬ್ಬಳ ಚಿತ್ರವನ್ನು ಬಳಸಿಕೊಳ್ಳಲಾಗಿದೆ. ಒಂದು ಕೊಠಡಿಯ ವೈಭವಪೂರಿತ ಅಲಂಕಾರದ ಜಾಹೀರಾತು ಸ್ತ್ರೀಯು ಇಲ್ಲದೆ ಅಪರಿಪೂರ್ಣ.

ಪ್ರೀಮಿಯರ್ ಕಾರ್ಪೆಟ್‌ನ ಜಾಹೀರಾತಿಗೂ ಅಲ್ಲಿ ಬಳಸಲಾದ ಚಿತ್ರಕ್ಕೂ ಇರುವ ಸಂಬಂಧವನ್ನು ನೋಡಿ ಒಂದು ಪುಟದಲ್ಲಿ ಗರ್ಭಿಣಿಯಾದ ಹೆಂಗಸು ಹೊಟ್ಟೆಯ ಮೇಲೆ ಕೈಯಿಟ್ಟುಕೊಂಡು ಬಾಗಿಲಿಗೊರಗಿ, ಹೆರಿಗೆ ನೋವಿನ ಬಗ್ಗೆ ಚಿಂತಾಕ್ರಾಂತಳಾಗಿದ್ದಾಳೆ, ಪಕ್ಕದ ಪುಟದ ಅದೇ ಜಾಹೀರಾತಿನಲ್ಲಿ ಅವಳಿಗೆ ಮಗು ಹುಟ್ಟಿದೆ ಅವಳ ಮುಖದ ಮೇಲೆ ನೋವು ಮರೆಯಾಗಿ ಮುಖದಲ್ಲಿ ಮಧುರ ಕ್ಷಣಗಳು. ಕಾರಣ ಅವಳು ಪ್ರಿಮಿಯರ್ ವಿನಾಯಿಲ್‌ರವರ ವೈಭವಪೂರಿತ ಕಾರ್ಪೆಟ್ ಮೇಲೆ ಆರಾಮವಾಗಿ ಮಲಗಿ, ಮಗುವಿನೊಂದಿಗೆ ಆಟವಾಡುತ್ತಿದ್ದಾಳೆ. ಹೆಂಗಸಿನ ಹೆರಿಗೆ ನೋವಿಗೂ, ಅದು ಪರಿಹಾರವಾದ ಕಾರಣಕ್ಕೂ, ಕಾರ್ಪೆಟ್‌ಗೂ ಏನಾದರೂ ಸಂಬಂಧವಿದೆಯೆ? ಇನ್ನೊಂದು ಕಾರ್ಪೆಟ್‌ನ ಜಾಹೀರಾತು ಪ್ರಚೋದನಾಕಾರಿ ಸ್ತ್ರೀ.

ಅಗರಬತ್ತಿಯ ಜಾಹೀರಾತುಗಳು ಸ್ತ್ರೀಯರನ್ನು ಬಿಟ್ಟಿರಲಾರವು! ಸಂಪ್ರದಾಯಿಕವಾಗಿ, ತಲೆಯ ಮೇಲೆ ಸೆರಗು, ಹಣೆಯಲ್ಲಿ ದೊಡ್ಡದಾದ ಕುಂಕುಮ. ಸ್ತ್ರೀಯೇ ದೈವಿಕ ಭಾವನೆಯ ಪ್ರತೀಕವೆಂಬಂತೆ. ನಸುನಗುತ್ತಿರುವ ಸ್ತ್ರೀಯನ್ನು ನಂದಿ ಅಗರಬತ್ತಿ ತನ್ನ ಜಾಹೀರಾತಿಗಾಗಿ ಉಪಯೋಗಿಸುತ್ತದೆ. ಕೊಬ್ಬರಿಎಣ್ಣೆ ಕೇವಲ ಸ್ತ್ರೀಯರಿಗೆ ಮಾತ್ರ ಬೇಕೆ? ಕೆಲವೊಮ್ಮೆ ಸೌಂದರ್ಯವರ್ಧಕವಾಗಿ ಕೆಲವೊಮ್ಮೆ ಮನೆಯವರ ಆರೋಗ್ಯದ ನಿಧಿಯಾಗಿ, ಜಾಹೀರಾತುಪಡಿಸುತ್ತದೆ. ಫರ್ ಕೊಬ್ಬರಿ ಎಣ್ಣೆ, ಸ್ತ್ರೀಯೆಂದರೆ ಮನೆ, ಮನೆಯೆಂದರೆ ಸ್ತ್ರೀಯೆಂಬ ತತ್ವವನ್ನು ಎಣ್ಣೆಯ ಮೂಲಕ ಮಾರಾಟ ಮಾಡುತ್ತಾರೆ.

ಆಧುನಿಕವಾಗಿ ಬಟ್ಟೆ ಧರಿಸಿದ ಸ್ತ್ರೀಯೊಬ್ಬಳು ತೂಗುಯ್ಯಾಲೆಯಲ್ಲಿ ಮಲಗಿ ಪುಸ್ತಕ ಓದುತ್ತಿದ್ದಾಳೆ. ಅವಳ ಕಾಲಲ್ಲಿನ 'ಶೂ'ಗಳು ಎದ್ದುಕಾಣುತ್ತವೆ. 'ನಾರ್ತಸ್ಟಾರ್' ಶೂಗಳ ಮಾರಾಟಕ್ಕೆ ಈಕೆ ಚೆಂದದ ಗೊಂಬೆಯಾಗಿ ಕಾಣಿಸುತ್ತಾಳೆ.

ಸ್ತ್ರೀಯರನ್ನು ಭೋಗದ ವಸ್ತುವನ್ನಾಗಿ ಉಪಯೋಗಿಸಿ, ವಸ್ತುಗಳನ್ನು ಮಾರಾಟ ಮಾಡುವುದರ ಜೊತೆಗೆ ಸ್ತ್ರೀಯರ ಬಗೆಗೆ ಅಸ್ತಿತ್ವದಲ್ಲಿರುವ ಇನ್ನೊಂದು ಅತಿರೇಕದ ಧೋರಣೆಯನ್ನು ಪ್ರತಿಬಿಂಬಿಸುತ್ತದೆ. ಫೋಟೋ, ಸ್ಟುಡಿಯೋದ ಜಾಹೀರಾತು, ತೆರೆದ ಎದೆಯ ಬಿಕಿನಿಯನ್ನು ತೊಟ್ಟ ಮಹಿಳೆಯೋರ್ವಳ ಚಿತ್ರವನ್ನು ಒಳಗೊಂಡಿದೆ. ಪ್ರಚೋದನಾಕಾರಿಯಾದ ಈ ಚಿತ್ರ, ಜನರ ಆಕರ್ಷಣೆಯನ್ನು ಗಳಿಸುವುದೇ ಆಗಿದೆ.

ಐಸ್‌ಕ್ರೀಮ್ ಮಾರಾಟಕ್ಕೂ, ಸ್ತ್ರೀಗೂ ಏನು ಸಂಬಂಧ ! ಯಾಂಕೀ ಡ್ಯೂಡಲ್‌ನ ಜಾಹಿರಾತು, ತಾನು ತಯಾರಿಸಿ ಮಾರಾಟಮಾಡುವ ಐಸ್‌ಕ್ರೀಮ್‌ಗೂ, ಸ್ತ್ರೀಯನ್ನು ಕಾಮದ ಗೊಂಬೆಯಾಗಿ ಉಪಯೋಗಿಸುವುದಕ್ಕೂ ಸಂಬಂಧಕಲ್ಪಿಸುತ್ತದೆ. ಇದು ಬಳಸುವ ಸ್ತ್ರೀಯ ಚಿತ್ರ, ಗ್ರಾಹಕರು ಐಸ್‌ಕ್ರೀಮ್‌ನಂತೆ, ತನ್ನನ್ನು ಸವಿಯಬಹುದು ಎಂಬಂಥ ಅರ್ಥ ಧ್ವನಿಸುವಂತಿದೆ. ಲ್ಯೂರೆ ಕೋಲ್ಡ ವ್ಯಾಕ್ಸನ ಜಾಹಿರಾತು, ಸ್ತ್ರೀಯನ್ನು ಈ ಅರ್ಥದಲ್ಲಿ ಉಪಯೋಗಿಸಿಕೊಳ್ಳುವುದರ ಜೊತೆಗೆ, ಈಜುಡುಗೆ ತೊಟ್ಟ ಈ ಮಹಿಳೆ, ಧೈರ್ಯದ ಹೊಸ ಪೀಳಿಗೆ.

ಪತ್ರಿಕೆಗಳಲ್ಲಿ, ಅದರಲ್ಲೂ ಮಧ್ಯಮ ವರ್ಗದ ಎಳೆಯ ತರುಣೆಯರಿಗೆ, ಫ್ಯಾಷನ್ ಪುಟಗಳನ್ನು ಪ್ರಕಟಿಸಲಾಗುತ್ತಿದೆ. ವಿವಿಧ ಮಾದರಿಯ ಬಟ್ಟೆಗಳಿಗಾಗಿ, ಸ್ತ್ರೀಯರ ವಿವಿಧ ಭಂಗಿಗಳನ್ನು ನೀಡುವುದರ ಮೂಲಕ ಜಾಹಿರಾತು ಪಡಿಸಲಾಗುತ್ತಿದೆ. ಇದರೊಂದಿಗೆ, ಕೆಲವು ಮಾದರಿಯ ಫ್ಯಾಶನ್ ಉಡುಗೆಗಳ ಜಾಹಿರಾತುಗಳಿಗಾಗಿ ವಿದೇಶಿ ಮಹಿಳೆಯರ ಚಿತ್ರಗಳನ್ನು ಬಳಸಿಕೊಳ್ಳಲಾಗುತ್ತಿವೆ. ಇದು ಕೇವಲ ಉಡುಗೆಯ ಜಾಹಿರಾತಾಗಿರದೇ, ಸ್ತ್ರೀಯನ್ನು ಪ್ರದರ್ಶಿಸುವುದೇ ಮುಖ್ಯ ಗುರಿಯಾಗಿರುವುದನ್ನು ನಾವು ಗಮನಿಸಬಹುದು. ಇಂತಹ ಪುಟಗಳಿಗಾಗಿಯೇ, ಪತ್ರಿಕೆಯನ್ನು ಕೊಳ್ಳುವ ಓದುಗರ ಒಂದು ವರ್ಗವೇ ಇದೆ.

ಸೌಂದರ್ಯ ವರ್ಧಕ ವಸ್ತುಗಳ ಮಾರಾಟಕ್ಕೆ ಸೌಂದರ್ಯ ವರ್ಧಕಗಳ ಜಾಹೀರಾತು ಸಂಪೂರ್ಣವಾಗಿ ಮಧ್ಯಮ ವರ್ಗದ ಸ್ತ್ರೀಯರ ಭ್ರಮಾಲೋಕದ ಆಧಾರದ ಮೇಲೆ ನಿಂತಿದೆಯೆಂದರೆ ತಪ್ಪಾಗಲಾರದು. ಸ್ತ್ರೀಯರು ತಮ್ಮ ದೈಹಿಕ ಸೌಂದರ್ಯದ ಪ್ರಾಮುಖ್ಯವನ್ನು ಜೀವನದ ಪರಮಾವಧಿ ಸತ್ಯವೆಂದು ಪರಿಗಣಿಸುವುದರ ಜೊತೆಗೆ, ಅದು ಸ್ತ್ರೀಯರ ವ್ಯಕ್ತಿತ್ವವನ್ನು ರೂಪಿಸುವ ಹಾಗೂ ಅಳೆಯುವ ಒಂದು ಸಾಧನವಾಗಿದೆ. ಹೀಗೆ, ಸ್ತ್ರೀಯ 'ರೂಪ'ಕ್ಕೆ ಹೆಚ್ಚು ಒತ್ತುಕೊಡಲಾಗಿರುವುದರಿಂದ, ಸುಂದರವಾಗಿರುವ ಸ್ತ್ರೀಯರು ಮೇಲರಿಮೆಯಿಂದ, ಮೆರೆಯುವಂತೆ ಮಾಡಿದರೆ, ಇದು ಸುಂದರವಲ್ಲದ ಸ್ತ್ರೀಯರಲ್ಲಿ ಕೀಳರಿಮೆಯನ್ನು ಸೃಷ್ಟಿಸುತ್ತದೆ. ಇದು ಕೃತಕ ಸೌಂದರ್ಯ ಸಾಧನೆಗಳ ಮೂಲಕ ಸ್ತ್ರೀಯರು ಮೇಲಿನ ಗುರಿಯನ್ನು ತಲುಪುವ ಪ್ರಯತ್ನವನ್ನು ಪಡುತ್ತಾರೆ. ಮುಖದ ಮೇಲಿನ ಮೊಡವೆಗಳ ಪರಿಹಾರಕ್ಕೆ ಎಸ್‌ಕೆಮೆಲ್, ಆಕರ್ಷಣೀಯ ಮುಖದ ಚರ್ಮಕ್ಕೆ ಲೂರೆ ಬ್ಯೂಟಿ ಮಾಸ್ಕ, ಸಾವಿರಾರು ಶಬ್ದಗಳನ್ನು ಪಿಸುಗುಟ್ಟುವ ಮಮ್ತಾಜ್ ಹರ್ಬಲ್, ಕಾಡಿಗೆ, ಕಲಾವಂತ ಮುಖಕ್ಕೆ ಕಾಂತಿ ನೀಡುವ ಹಾಗೂ ಸ್ತ್ರೀತ್ವದ ಹಿರಿಮೆ, ಭಾರತೀಯ ಸಂಪ್ರದಾಯವನ್ನು ಬಲಪಡಿಸುವ ಐಟೆಕ್ಸ್ ಕಾಡಿಗೆ, ಹೀಗೆ ಬರೆಯುತ್ತಾ ಹೋದರೆ ಪುಟಗಳೇ ಸಾಲದಾಗಬಹುದು. ಸೋಪುಗಳ ಜಾಹಿರಾತು, ಸ್ತ್ರೀಯ ದೈಹಿಕ ಸೌಂದರ್ಯಕ್ಕೆ ಒತ್ತು ಕೊಡುವುದರ ಜೊತೆಗೆ, ಸ್ತ್ರೀಯರನ್ನು ತನ್ನ ಮಾರಾಟದ ತಂತ್ರಕ್ಕೆ ಬಳಸಿಕೊಳ್ಳುತ್ತವೆ, ಪಾಮೋಲಿನ್ ಸೋಪು, ರಿನ್ ಸೋಪು, ಸಂತೂರ್, ಏರೋಪ್ಲೇನ್ ಸೀಗೆಕಾಯಿ, ಎಲ್ಲವೂ, ಆರೋಗ್ಯದ ಕಡೆಗೆ ಗಮನ ಕೊಡುವುದರ ಬದಲು ಸ್ನಾನ ಮಾಡುವ ಸ್ತ್ರೀಯನ್ನು ಬಳಸಿಕೊಳ್ಳುವುದರ ಮೂಲಕ ತಮ್ಮ ವಸ್ತುಗಳಿಗೆ ಮಾರುಕಟ್ಟೆಯನ್ನು ಪಡೆಯಲು ಹೊಂಚುಹಾಕುತ್ತವೆ.

ಈ ಕೃತಕ ಸೌಂದರ್ಯವರ್ಧಕಗಳು ಸ್ತ್ರೀಯರ ಆರೋಗ್ಯದ ಮೇಲೆ ಬೀರುವ ಪರಿಣಾಮವನ್ನು ಕುರಿತು ಈ ಜಾಹಿರಾತು ಸಂಸ್ಥೆಗಳು ಯೋಚಿಸುತ್ತಿವೆಯೆ ? ಸಮಾಜದಲ್ಲಿ ಬೇರೂರಿರುವ 'ಸ್ತ್ರೀಯರೆಂದರೆ ಅಲಂಕಾರದ ಗೊಂಬೆ'ಗಳೆಂಬ ಮೌಲ್ಯವನ್ನು ವಾಣಿಜ್ಯ ಸಂಸ್ಥೆಗಳು ಬಳಸಿಕೊಳ್ಳುವುದರ ಜೊತೆಗೆ, ಸ್ತ್ರೀಯರು ಅಲಂಕಾರದ ಗೊಂಬೆಗಳೆಂಬ ನಂಬಿಕೆಯನ್ನು ಮುಂದುವರಿಸಲು ಪೂರಕವಾಗಿ ಕೆಲಸ ಮಾಡುತ್ತವೆ. ಜನರು ಹಣಕೊಟ್ಟು ಈ ವಸ್ತುಗಳನ್ನು ಕೊಳ್ಳುವುದರ ಜೊತೆಗೆ ಈ ಮೌಲ್ಯಗಳನ್ನು ಕೊಂಡುಕೊಂಡು ತಮ್ಮದನ್ನಾಗಿಸಿಕೊಳ್ಳುತ್ತಾರೆ.

ನವೀನ ಉಡುಗೆ ತೊಡುಗೆಗಳ ಜಾಹಿರಾತುಗಳಲ್ಲಿ ಹಾಗೂ ಫ್ಯಾಶನ್ ಪುಟಗಳಲ್ಲಿ ಸ್ತ್ರೀಯರನ್ನು ಹೆಚ್ಚು ಪ್ರಚೋದನಾಕಾರಿಯಾಗಿ, ಚಿತ್ರಿಸಿ ಬೇಡಿಕೆಯನ್ನು ಗಳಿಸಲು ಯತ್ನಿಸಿದರೆ, ಸಾಂಪ್ರದಾಯಿಕ ಉಡುಗೆ ತೊಡುಗೆಗಳ

ಜಾಹಿರಾತು ಸಾಂಪ್ರದಾಯಿಕ ಪಾತ್ರದಲ್ಲಿ ಸ್ತ್ರೀಯರನ್ನು ಗಮನ ಸೆಳೆಯಲು ಯತ್ನಿಸುತ್ತದೆ. ಆಧುನಿಕ ರಾಜ ಕುಮಾರಿಯನ್ನಾಗಿ ಮಾಡುವ, ಕಲಾತ್ಮಕತೆಗೆ ಹೋಲಿಸುವ ಸಾಂಪ್ರಾದಾಯಿಕ ಕಲೆಗೆ ಹೋಲಿಸುವ. ಸಂಪ್ರದಾಯಕ್ಕೆ ಮೆರಗು ನೀಡುವುದರೊಂದಿಗೆ ಈ ಜಾಹಿರಾತುಗಳು ಸ್ತ್ರೀಯ ಸಂಪ್ರದಾಯಿಕ ಪಾತ್ರವನ್ನು ಒತ್ತಿ ಹೇಳುತ್ತದೆ. ಕುಶಲ ಕಲೆಯುಳ್ಳ ಬ್ಲೌಸ್‌ನ ಜಾಹಿರಾತು 'ಈ ಬ್ಲೌಸ್ ತೊಡುವುದರ ಮೂಲಕ ನಿಮ್ಮ ಸ್ತ್ರೀತ್ವವನ್ನು ಹೆಚ್ಚಿಸಿ ಕೊಳ್ಳಿ ಎಂದು ಕರೆ ನೀಡುತ್ತದೆ.

**ಹೊಸಗ್ರಾಹಕರು...?**

ತಾವು ಉತ್ಪಾದಿಸುವ ವಸ್ತುಗಳಿಗೆ ಮಾರುಕಟ್ಟೆಯನ್ನು ಸೃಷ್ಟಿಸಿಕೊಳ್ಳಲು ಹಾಗೂ ಅಸ್ತಿತ್ವದಲ್ಲಿರುವ ವಸ್ತುಗಳ ಜೊತೆಗೆ ಪೈಪೋಟಿ ನಡೆಸಲು ವಾಣಿಜ್ಯ ಕಂಪನಿಗಳು ನವೀನ ತಂತ್ರಗಳನ್ನು ಅಳವಡಿಸಿಕೊಳ್ಳುತ್ತವೆ. ಬದಲಾಗುತ್ತಿರುವ ಧೋರಣೆ ಹಾಗು ಮೌಲ್ಯಗಳನ್ನು ಬಳಸಿಕೊಂಡು ತಮ್ಮ ವಸ್ತುವನ್ನು ಮಾರಾಟ ಮಾಡುತ್ತವೆ. ಸಮಾಜದಲ್ಲಿ ಸ್ತ್ರೀಯರ ಬಗೆಗೆ ಬದಲಾಗುತ್ತಿರುವ ಪ್ರಗತಿಪರ ಮೌಲ್ಯಗಳನ್ನು ಕೆಲ್ವಿನೇಟರ್ ಕಂಪನಿಯ ಫ್ರಿಜ್‌ನ ಜಾಹೀರಾತು ಇದಕ್ಕೊಂದು ನಿದರ್ಶನ.

---

ಲಾಭಗಳಿಕೆಯ ಉದ್ದೇಶದಿಂದ ಒಂದೇ ವಸ್ತುವನ್ನು ಉತ್ಪಾದಿಸಿ ಮಾರುಕಟ್ಟೆಗೆ ಬಿಡುಗಡೆಮಾಡಿದಾಗ, ಇತರ ವಸ್ತುಗಳೊಡನೆ ಅವು ಪೈಪೋಟಿ ನಡೆಸಬೇಕಾಗುತ್ತದೆ. ಸೋಪು, ಪೇಸ್ಟು, ನಾನಾ ವಿಧಧ ಸೌಂದರ್ಯವರ್ಧಕಗಳು ಹೀಗೆ ನಾನಾ ಬ್ರಾಂಡಿನ ವಸ್ತುಗಳು ಮಾರುಕಟ್ಟೆಯಲ್ಲಿವೆ. ಒಂದು ಅಂದಾಜಿನ ಪ್ರಕಾರ ನಾನಾ ಬ್ರಾಂಡ್‌ನ ಒಂದೇ ವಸ್ತುಗಳು ಸರಾಸರಿ 25 ರಿಂದ 50 ರಷ್ಟಿವೆ.

---

"ಮಹಿಳೆಯರು ಪುರುಷರಿಗಿಂತ ಬುದ್ಧಿವಂತರು. ಏಕೆಂದರೆ ಅವರು ಪುರುಷರಷ್ಟು ತಿಳಿದವರಲ್ಲ ಆದರೆ, ಸ್ತ್ರೀಯರು ಪುರುಷರಿಗಿಂತ ಚೆನ್ನಾಗಿ ಅರ್ಥಮಾಡಿಕೊಳ್ಳ ಬಲ್ಲರು" ಜೇಮ್ಸ್‌ಸ್ಟೀಫನ್ಸ್‌ನ ವ್ಯಾಖ್ಯಾನವನ್ನು ನೀಡುವುದರೊಂದಿಗೆ ಪ್ರಾರಂಭವಾಗುವ ಈ ಜಾಹೀರಾತು ಸ್ತ್ರೀಯರನ್ನು 'ಹೊಸ' ನೋಟದಿಂದ ನೋಡುವುದರ ಮೂಲಕ ಫ್ರಿಜ್‌ನ ಮಾರಾಟಕ್ಕೆ ಸ್ತ್ರೀಯರನ್ನು ಹೇಗೆ ಬಳಸಿಕೊಳ್ಳುತ್ತದೆಯೆಂಬುದನ್ನು ನೋಡಬಹುದು.

ಕೆಲ್ವಿನೇಟರ್ ವಾಣಿಜ್ಯ ಕಂಪನಿಯ ಮಾರುಕಟ್ಟೆ ವ್ಯವಸ್ಥಾಪಕರಾದ ಕ್ರಾಫ್ರಿಹಾನ್ ಸ್ತ್ರೀಯರ ಧೈರ್ಯ ಹಾಗೂ ಸಾಹಸ ಪ್ರವೃತ್ತಿಯನ್ನು ಮೆಚ್ಚಿಕೊಳ್ಳುವುದರ ಜೊತೆಗೆ ಇಂದಿನ ಸಂದರ್ಭದಲ್ಲಿ ಮನೆಯೊಳಗಾಗಲೀ, ದುಡಿಮೆಯ ಕ್ಷೇತ್ರದಲ್ಲಾಗಲೀ ನಾವು ಸ್ತ್ರೀಯರನ್ನು 'ಹಗುರ'ವಾಗಿ ಪರಿಗಣಿಸಲು ಸಾಧ್ಯವಿಲ್ಲವೆಂದು ಹೇಳುತ್ತಾರೆ.

ಮಾರುಕಟ್ಟೆಯಲ್ಲಿ ಇತರ ವಾಣಿಜ್ಯ ಕಂಪನಿಯ ಫ್ರಿಜ್‌ಗಳ ಜೊತೆ ಪೈಪೋಟಿ ನಡೆಸಲು, ಕೆಲ್ವಿನೇಟರ್ ಹೊಸ ಗ್ರಾಹಕರನ್ನು, ತಲುಪಲು, ನವೀನ ಮಾದರಿಯ ಜಾಹೀರಾತು ಧೋರಣೆಯನ್ನು ಅಳವಡಿಸಿಕೊಂಡಿದೆ. ಈ ಹೊಸ ಗ್ರಾಹಕರು 'ಆಧುನಿಕ' ಸ್ತ್ರೀಯರು. ಈ ಉದ್ದೇಶಕ್ಕಾಗಿಯೇ ಕಂಪನಿಯ ಲಾಂಛನದಲ್ಲಿ ಸ್ತ್ರೀಯ ಚಿತ್ರವನ್ನು ಒಳಗೊಳ್ಳುವಂತೆ ಬದಲಾವಣೆಯನ್ನೇ ಮಾಡಿದೆ.

ಈ ವಾಣಿಜ್ಯ ಕಂಪನಿಯ ಜಾಹೀರಾತು ಧೋರಣೆಯಲ್ಲಿ ಬದಲಾವಣೆಯುಂಟಾಗಲು ಮುಖ್ಯ ಕಾರಣ, ಕಂಪನಿಯವರು ನಡೆಸಿದ ಸಮೀಕ್ಷೆಯ ಪ್ರಕಾರ ವಸ್ತುಗಳನ್ನು ಕೊಳ್ಳುವಲ್ಲಿ ಸ್ತ್ರೀಯರು ಅತ್ಯಂತ ಮಹತ್ವವಾದ ಪಾತ್ರವನ್ನು ವಹಿಸುತ್ತಾರೆ. ಈ 'ಸ್ತ್ರೀತ್ವದ' ಜಾಹೀರಾತಿನ ಮೂಲಕ ಪುರುಷರ ಗಮನವನ್ನು ಸೆಳೆಯುವುದು ಕಂಪನಿಯ ಉದ್ದೇಶ.

ಹೊರಗೆ ದುಡಿಯುವ ಮಹಿಳೆಯರು, ಮನೆಗೆ ಬಂದ ಕೂಡಲೇ ನಿರ್ವಹಿಸಬೇಕಾದ ಮನೆಕೆಲಸದ ಬಗ್ಗೆ ಜಾಹೀರಾತು ಕಂಪನಿಗಳು ಹುಸಿ ಸಹಾನುಭೂತಿಯನ್ನು ತೋರಿಸುವುದರ ಮೂಲಕ ಮಧ್ಯಮ ವರ್ಗ ಸ್ತ್ರೀಯರ ಮನ ಗೆಲ್ಲಲು ಯತ್ನಿಸುತ್ತವೆ. ಬಿ.ಪಿ.ಎಲ್. ಸ್ಯಾನ್ಯೋದ ಸಹಾಯಕ ವ್ಯವಸ್ಥಾಪಕರಾದ ಅಮೃತ್‌ಸಿಂಗ್ ನಾವು ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಬದುಕುತ್ತಿದ್ದೇವೆಂಬುದನ್ನು ಮರೆಯಲು ಸಾಧ್ಯವಿಲ್ಲ. ನಾಲ್ಕು ಗೋಡೆಯ ಚೌಕಟ್ಟಿನಿಂದ ಹೊರಬಂದ ಮಹಿಳೆಯ ಮೇಲೆ ಮನೆ ಕೆಲಸದ ಜವಾಬ್ದಾರಿಗಳನ್ನೂ ಹೇರಲಾಗುತ್ತಿದೆ. ಮನೆಗೆ ಬಂದಾಗ ಮನೆಗೆಲಸದ ಹೊರೆಗಳು ಅವಳನ್ನು ಕಾಯ್ದಿರುತ್ತವೆ. ಅವಳ ಕೆಲಸಗಳನ್ನು ಹಗುರಗೊಳಿಸಲು ಹಾಗೂ ಸರಳಗೊಳಿಸಲು ರೆಫ್ರಿಜೇಟರ್‌ನಂತಹ ಕಿರು ಕಾಣಿಕೆಯನ್ನು, ನಾವು ನೀಡುತ್ತೇವೆಂದು ಹೇಳುತ್ತಾ, ಸ್ತ್ರೀಯರ ವ್ಯಕ್ತಿತ್ವದ ವಿಕಸನಕ್ಕೆ ಬೇಕಾದ ಸಮಯವನ್ನು ನೀಡು

ವುದರ ಮೂಲಕ ಅವಳ ಅಭಿವೃದ್ಧಿಗೆ ಕಾರಣವಾಗುತ್ತಿದ್ದೇವೆ. ಇದು "ಸ್ತ್ರೀಯರಿಗಾಗಿಯೇ" ಇರುವ ಮಾರಾಟದ ವಿಧಾನ.

ಕೆಲ್ವಿನೇಟರ್ ಪ್ರಗತಿಪರತೆಯು ಸೋಗಿನಲ್ಲಿ ಫ್ರಿಜ್‌ನ್ನು ಮಾರಾಟ ಮಾಡುವದಷ್ಟೇ ಅಲ್ಲ. ಇನ್ನು ಒಂದು ಹೆಜ್ಜೆ ಮುಂದೆ ಹೋಗಿ ಕೆಲ್ವಿನೇಟರ್ ಕಂಪನಿಯು ಮೈಕ್ರೊವೇವ್ ವಿಭಾಗವನ್ನು ಸಂಪೂರ್ಣವಾಗಿ ನಿರ್ವಹಿಸುವವರು ಸ್ತ್ರೀಯರು. ಕಂಪನಿಯು ಬಗೆಗಿನ ದೂರುಗಳನ್ನು ಪುರುಷರು ದಾಖಲು ಮಾಡುತ್ತಿರುವಾಗ ಪ್ರತಿಕೂಲವಾಗಿದ್ದ ಪರಿಸ್ಥಿತಿ ಸ್ತ್ರೀಯರನ್ನು ನೇಮಕ ಮಾಡಿಕೊಂಡಾಗ "ಕೋಮಲವಾದ ಸ್ತ್ರೀಯರ 'ಧ್ವನಿ'ಯಲ್ಲಿಯೇ ಗ್ರಾಹಕರ 'ದೂರು'ಗಳಿಗೆ ಪರಿಹಾರವಿರುತ್ತದೆ. "ಸ್ತ್ರೀಯರ ಭಾವನೆಗಳನ್ನು ಸ್ತ್ರೀಯರು ಮಾತ್ರ ಅರ್ಥಮಾಡಿಕೊಳ್ಳಬಲ್ಲರು" ಸ್ತ್ರೀಯರಿಂದಲೇ ವಿನ್ಯಾಸಗೊಳಿಸಿರುವ .................. ಎಂಬ ಘೋಷಣೆಗಳ ಮೂಲಕ ಮಧ್ಯಮ ವರ್ಗದ ಸ್ತ್ರೀಯರ ಭ್ರಮಾತ್ಮಕ ಲೋಕದ ಕನಸುಗಳ ಮನಸ್ಸನ್ನು ಗೆಲ್ಲಲು ಯತ್ನಿಸುತ್ತದೆ. ಇಂತಹ ಜಾಹೀರಾತಿಗಾಗಿ ಬಳಸುವ ಸಮರ್ಥ ಭಾಷೆ, ಗ್ರಹಿಕೆಯ ವಿಧಾನ, ಅದನ್ನು ಗ್ರಾಹಕರ ಮುಂದಿಡುವ ರೀತಿ, ತಂತ್ರ ಇವುಗಳನ್ನು ಗಮನಿಸಿದರೆ ಸ್ತ್ರೀವಾದಿಗಳು ಆಶ್ಚರ್ಯಪಡಬೇಕು

ಇಂದು ಜಾಹೀರಾತು ಪ್ರಪಂಚ ವೈಜ್ಞಾನಿಕವಾದ ದೃಷ್ಟಿಕೋನವನ್ನು ಅಳವಡಿಸಿಕೊಳ್ಳುವುದರ ಜೊತೆಗೆ ಸಮಾಜದಲ್ಲಿ ಕಂಡುಬರುವ ಪ್ರತಿಯೊಂದು ಅಂಶವನ್ನು ಗಣನೆಗೆ ತೆಗೆದುಕೊಂಡು ಅದರ ಹಿನ್ನೆಲೆಯಲ್ಲಿ ಪ್ರತಿಕ್ರಿಯಿಸುತ್ತವೆ. ಕನಸುಗಾರಿಕೆಯ ಮಧ್ಯಮ ವರ್ಗವೇ ಜಾಹೀರಾತು ಪ್ರಪಂಚದ ನೆಲೆ, ಅದರಲ್ಲೂ ವಿಶೇಷವಾಗಿ ಮಧ್ಯಮ ವರ್ಗದ ಮಹಿಳೆಯರನ್ನೇ ಪ್ರಮುಖ ಗುರಿಯಾಗಿ ಇಟ್ಟುಕೊಂಡಿವೆ. ಒಂದು ವಸ್ತುವನ್ನು ಮಾರುಕಟ್ಟೆಗೆ ಬಿಡುಗಡೆ ಮಾಡುವ ಮುನ್ನ, ಮಧ್ಯಮ ವರ್ಗದ ಅಭಿರುಚಿ ಅದರಲ್ಲಿ ಬದಲಾಗುತ್ತಿರುವ ಒಲವು, ಅವರ ಅವರ ಭಾವಾನಾತ್ಮಕ ಸ್ಪಂದನೆ, ಮುಂತಾದವುಗಳನ್ನು ವೈಜ್ಞಾನಿಕವಾಗಿ ಸಮೀಕ್ಷೆ ಮಾಡಿದ ನಂತರ ವಸ್ತುಗಳನ್ನು ಮಾರುಕಟ್ಟೆಗೆ ಬಿಡುಗಡೆ ಮಾಡುತ್ತವೆ.

ಜಾಹೀರಾತುಗಳು ಸಮಾಜದಲ್ಲಿನ ರೂಢಿಯಲ್ಲಿರುವ ಸ್ತ್ರೀಯರ ಬಗೆಗಿರುವ ಮೌಲ್ಯ, ಸಂಪ್ರದಾಯ, ನಂಬಿಕೆಗಳನ್ನು ಪ್ರತಿಬಿಂಬಿಸುತ್ತದೆಯೇ? ಯಾವ ಹಂತದಲ್ಲಿ ಎಂಬ ಪ್ರಶ್ನೆಗಳನ್ನು ಕೇಳಿಕೊಂಡಾಗ, ನಮ್ಮ ಸಮಾಜದಲ್ಲಿ ಮಧ್ಯಮ ವರ್ಗದ ಮಹಿಳೆಯರೆಷ್ಟು? ಜಾಹೀರಾತು ವ್ಯಾಪಾರದ ವಸ್ತುಗಳನ್ನು ಕೊಳ್ಳುವ ಶಕ್ತಿ ಇರುವ ಮಹಿಳೆಯರೆಷ್ಟು? ಬಡತನದ ರೇಖೆಗಿಂತ ಕೆಳಗೆ ವಾಸಿಸುವ ದುಡಿಯುವ, ಹಾಗೂ ರೈತ ಮಹಿಳೆಯರ ಬಗೆಗಿರುವ ಮೌಲ್ಯಗಳು, ನಂಬಿಕೆ. ಸಂಪ್ರಾದಾಯಗಳು ಪ್ರಾತಿನಿಧಿಕವಲ್ಲವೇ?

ಸರ್ಕಾರ ಹಾಗೂ ದೊಡ್ಡ ದೊಡ್ಡ ವಾಣಿಜ್ಯ ಕಂಪನಿಗಳಿಂದ ನಿಯಂತ್ರಣಗೊಂಡ ಜಾಹೀರಾತುಗಳು, ಸಮೂಹ ಮಾಧ್ಯಮಗಳು, ಶೋಷಿತ ಜನಾಂಗದ ವಾಸ್ತವ ಚಿತ್ರಣವನ್ನು ಪ್ರತಿಬಿಂಬಿಸುತ್ತವೆಯೇ? ಶೋಷಿತ ಜನಾಂಗದ ದನಿಯನ್ನು ಗುರುತಿಸುವಾಗಲೂ ಸಹ, ಇಂತಹ ಸಮಸ್ಯೆಗಳಿಗೆ ಬೇರೆ ಬಣ್ಣವನ್ನು ಬಳಿದುಬಿಡುವ ಸಾಧ್ಯತೆಯೇ ಹೆಚ್ಚು. ಸಮೂಹ ಮಾಧ್ಯಮಗಳಿಂದ ಪ್ರಭಾವಿತರಾಗುವ ಮಹಿಳೆಯರಾಗಲಿ, ಪುರುಷರಾಗಲೀ ಅವುಗಳ ಮೇಲೆ ಯಾವುದೇ ಹತೋಟಿ ಹಾಗೂ ನಿಯಂತ್ರಣವನ್ನು ಹೊಂದಿರುವುದಿಲ್ಲ.

ಬಂಡವಾಳಶಾಹೀ ವ್ಯವಸ್ಥೆಯ ವಾಣಿಜ್ಯ ಕಂಪನಿಗಳು ತಮ್ಮ ವಸ್ತುಗಳಿಗೆ ಮಾರುಕಟ್ಟೆಯನ್ನು ಸೃಷ್ಟಿಸಿಕೊಳ್ಳಲು ನಡೆಸುವ ಪೈಪೋಟಿಗೆ ಸ್ತ್ರೀಯರನ್ನು ಬಳಸಿಕೊಳ್ಳುವುದನ್ನು ಮಹಿಳಾ ಸಂಘ ಸಂಸ್ಥೆಗಳು, ವ್ಯವಸ್ಥೆಯನ್ನು ವಿರೋಧಿಸುವುದರ ಜೊತೆಗೆ, ಪ್ರತಿಭಟಿಸಬೇಕಾಗುತ್ತದೆ. ಇಂತಹ ಪ್ರತಿಭಟನೆಗಳು ಆಗಾಗ ನಡೆಯದೇ ನಿರಂತರ ಹೋರಾಟವಾದಾಗ ಮಾತ್ರ ಗಮನಾರ್ಹವಾದ ಬದಲಾವಣೆಯನ್ನು ನಿರೀಕ್ಷಿಸಬಹುದೇನೋ?

# ಸ್ತ್ರೀ-ಸಂಬಂಧಿತ ಅಧ್ಯಯನಗಳು : ಧೃವೀಕೃತ ವಿಶ್ಲೇಷಣೆಯ ಗೊಂದಲ

ಸೀಮಂತಿನಿ ನಿರಂಜನ

ಐತಿಹಾಸಿಕವಾಗಿ ಮಹಿಳಾ ಅಧ್ಯಯನ ಎರಡು ಸ್ಥೂಲ ಕ್ಷೇತ್ರಗಳಲ್ಲಿ ಚರ್ಚೆ ನಡೆಯುತ್ತಾ ಬಂದಿರುವುದು ಸ್ಪಷ್ಟವಾಗುತ್ತದೆ. ಒಂದು ಆರ್ಥಿಕ ಅಸಮಾನತೆಯ ಚೌಕಟ್ಟು ಮತ್ತೊಂದು ಸ್ತ್ರೀತ್ವದ ಗುಣಗಳನ್ನು ಎತ್ತಿತೋರಿಸುವ ಸಾಂಸ್ಕೃತಿಕ ಚೌಕಟ್ಟು. ಈ ಎರಡೂ ಕ್ಷೇತ್ರಗಳೂ ತಮ್ಮದೇ ಆದ ನಿರ್ದಿಷ್ಟ ಕೇಂದ್ರ ಬಿಂದುಗಳ ಸುತ್ತ ತಿರುಗುತ್ತಾ, ಅವು ಒಳಸುಳಿಗಳಾಗಿ ಪರಿಣಮಿಸಿ ಪರಸ್ಪರ ಸಂವಾದ ಸಾಧ್ಯತೆಗಳನ್ನು ನುಂಗಿಹಾಕಿವೆ. ಎರಡೂ ಚೌಕಟ್ಟುಗಳ ನಡುವೆ ಕೊಂಡಿ ಬೆಸೆಯದೆ, ಯಾವುದೇ ಸಂಸ್ಕೃತಿ ಸ್ಥಾಪಿಸುವ ಲಿಂಗ ಅಸಮಾನತೆಯ ವಿವಿಧ ಪದರಗಳನ್ನು ಅರ್ಥಮಾಡಿಕೊಳ್ಳಲು ಆಗುವುದಿಲ್ಲ. ಇದು ಸಾಧ್ಯವಾಗಬೇಕಾದರೆ ಮೊದಲು ಈ ಕ್ಷೇತ್ರಗಳು ಪ್ರಸ್ತಾಪಿಸುವ ಮುಖ್ಯ ಪ್ರಶ್ನೆಗಳನ್ನು, ಅವುಗಳ ಪೂರ್ವಗ್ರಹಗಳನ್ನು ಕೆದಕಿ ನೋಡುವುದು ಅಗತ್ಯ.

ಕೆಲವು ವರುಷಗಳ ಹಿಂದಿನ ಮಾತು. 'ಮಹಿಳಾ ಅಧ್ಯಯನ' ಆಗ ಉಳಿವಿಗಾಗಿ ಹೊಡೆದಾಡುತ್ತಿದ್ದ ಕೂಸು. ಸಮಾಜದಲ್ಲಿ ಮತ್ತು ಅದನ್ನು ಕುರಿತಾದ ಅಧ್ಯಯನಗಳಲ್ಲಿ ಹೆಂಗಸಿನ ಗೈರು ಹಾಜರಿಯನ್ನು ಗುರುತಿಸುತ್ತಿದ್ದ ಸಂದರ್ಭ. ಸಾಮಾಜಿಕ ಬದುಕಿನ ಮುಖ್ಯ ವಾಹಿನಿಯ ಅಂಚಿಗೆ ನೂಕಲ್ಪಟ್ಟ ಸ್ತ್ರೀ, ನಮ್ಮ ಬಹುತೇಕ ಅಧ್ಯಯನ ಹಾಗೂ ವಿಶ್ಲೇಷಣಾ ಮಾದರಿಗಳಲ್ಲೂ ಅದೃಶ್ಯಳಾಗಿದ್ದಳು. ಈ ಪರಿಸ್ಥಿತಿಯ ಸುಧಾರಣೆಗಾಗಿ ಮಹಿಳಾ ಅಧ್ಯಯನವು ತನ್ನೆಲ್ಲಾ ಚೈತನ್ಯವನ್ನು ಮೀಸಲಿಟ್ಟಿತ್ತು.

ಇಂದು, ಮಹಿಳಾ ಪ್ರಶ್ನೆಯು ನಿರ್ದಿಷ್ಟ ಸ್ವರೂಪವನ್ನು ಪಡೆದಿದೆ. ಮಹಿಳಾ ಅಧ್ಯಯನದ ವ್ಯಾಪ್ತಿಯೂ ಕ್ರಮೇಣವಾಗಿ ವಿಸ್ತರಿಸಿದ್ದು, ಹೆಣ್ಣಿನ ಅಗೋಚರತೆಯ ಬಗ್ಗೆ ಈಗ ಅಷ್ಟು ಸುಲಭವಾಗಿ ಮಾತನಾಡಲು ಸಾಧ್ಯವಿಲ್ಲ. ಸ್ತ್ರೀ-ಸಂಬಂಧಿತ ವಿಷಯಗಳ ಬಗ್ಗೆ ದೇಶದಾದ್ಯಂತ ಇತ್ತೀಚಿನ ವರುಷಗಳಲ್ಲಿ ಹೊರಬಂದಿರುವ ಅಧ್ಯಯನ ಸಾಹಿತ್ಯವು ಇದಕ್ಕೆ ಸಾಕ್ಷಿಯಾಗಿದೆ. ಆರಂಭದಿಂದಲೂ ಈ ವಿಷಯದ ಬಗ್ಗೆ ವ್ಯಕ್ತವಾಗಿರುವ ಸ್ಪಷ್ಟ ವಿರೋಧದ ಹಿನ್ನೆಲೆಯಲ್ಲಿ ನೋಡಿದಾಗ, ತನ್ನ ಆಲೋಚನೆಗಳನ್ನು ಧೃಢವಾಗಿ ಸ್ಥಾಪಿಸಲು ಬಹುಷಃ ಸ್ತ್ರೀಯನ್ನುದ್ದೇಶಿಸಿದ ಈ ವಿಶೇಷ (ಒಮ್ಮೊಮ್ಮೆ ಅಧಿಕವೆನಿಸುವ) ಒತ್ತು ಅಗತ್ಯವೆಂದು ತೋರುತ್ತದೆ. ಆದರೂ ಮಹಿಳೆಯನ್ನು ಕುರಿತು ಈಗ ಹುಟ್ಟಿಕೊಂಡಿರುವ 'ಪರ್ಯಾಯ' ಮಾಹಿತಿಯ ಹರಹನ್ನು ಇನ್ನಷ್ಟು ಹತ್ತಿರದಿಂದ ಗಮನಿಸಿದಾಗ ಒಂದು ಅಂಶ ಸ್ಪಷ್ಟವಾಗುತ್ತದೆ. ಮಹಿಳೆ ಮತ್ತು ಅವಳ ಬದುಕನ್ನು ಕುರಿತಾದ ಮಾಹಿತಿಯ ಒಟ್ಟು ಗಾತ್ರ ದೊಡ್ಡದಾಗಿದ್ದರೂ ಈ ಅಧ್ಯಯನಗಳು ಬಳಸುವ ವಿಶ್ಲೇಷಣೆಯ ಮಾದರಿಗಳ ಕಡೆಗೆ ತೀಕ್ಷ್ಣ ವಿಮರ್ಶಾತ್ಮಕ ದೃಷ್ಟಿ ಹರಿಸಿರುವುದು ತೀರಾ ವಿರಳ. ಮಹಿಳಾ ಪ್ರಶ್ನೆ-ಅಧ್ಯಯನವು ಆಗಿಂದಾಗ್ಗೆ ಎದುರಿಸುವ ತೊಡಕುಗಳನ್ನು ಪರಿಹರಿಸಿಕೊಳ್ಳಬೇಕಾದರೆ, ಇಂಥ ವಿಮರ್ಶಾತ್ಮಕ ಕಾರ್ಯವನ್ನು ಹೆಚ್ಚು ಸಮಯ ಮುಂದೂಡಲು ಸಾಧ್ಯವಿಲ್ಲ.

ಐತಿಹಾಸಿಕವಾಗಿ ಭಾರತದಲ್ಲಿ ರೂಪಗೊಳ್ಳುತ್ತಾ ಬಂದಿರುವ ಮಹಿಳಾ ಪ್ರಶ್ನೆಯ ಜತೆಗೆ, ಮಹಿಳೆಯನ್ನು ಕುರಿತಾದ ಸಮಾಜ ಶಾಸ್ತ್ರೀಯ ಅಧ್ಯಯನಗಳಲ್ಲಿ ಪ್ರತಿಫಲನಗೊಳ್ಳುವ ಪೂರ್ವಾಪರಗಳನ್ನು ತಾಳೆ ನೋಡಿದಾಗ ಕೆಲವು ಕುತೂಹಲಕಾರಿ ಬೆಳವಣಿಗೆಗಳು ಕಾಣ ಸಿಗುತ್ತವೆ. ಉದ್ದಕ್ಕೂ, ಎರಡು ಸ್ಥೂಲ ಕ್ಷೇತ್ರಗಳಲ್ಲಿ ಚರ್ಚೆ ನಡೆಯುತ್ತ ಬಂದಿರುವುದು ಸ್ಪಷ್ಟವಾಗುತ್ತದೆ. ಒಂದು, ಅಸಮಾನತೆಯ (ಮುಖ್ಯವಾಗಿ ಆರ್ಥಿಕ ಅಸಮಾನತೆಯ) ಚೌಕಟ್ಟು ; ಮತ್ತೊಂದು, ಸ್ತ್ರೀತ್ವದ ಗುಣಗಳನ್ನು ಎತ್ತಿತೋರಿಸುವ ಸಾಂಸ್ಕೃತಿಕ ಚೌಕಟ್ಟು. ಈ ಎರಡೂ ಕ್ಷೇತ್ರಗಳು ತಮ್ಮದೇ ಆದ ನಿರ್ದಿಷ್ಟ ಕೇಂದ್ರ ಬಿಂದುಗಳ ಸುತ್ತ ತಿರುತಿರುಗುತ್ತಾ, ಅವು ಒಳಸುಳಿಗಳಾಗಿ ಪರಿಣಮಿಸಿ, ಪರಸ್ಪರ ಸಂವಾದ ಸಾಧ್ಯತೆಗಳನ್ನು ನುಂಗಿಹಾಕಿವೆ. ಇದರಿಂದ ಪಾರಾಗದೆ, ಅಂದರೆ, ವಿಶ್ಲೇಷಣೆಯ ಇವೆರಡೂ ಚೌಕಟ್ಟುಗಳ ನಡುವೆ ಕೊಂಡಿ ಬೆಸೆಯದೆ, ಯಾವುದೇ ಸಂಸ್ಕೃತಿ ಸ್ಥಾಪಿಸುವ ಲಿಂಗ-ಅಸಮಾನತೆಯ ವಿವಿಧ ಪದರಗಳನ್ನು ಅರ್ಥ ಮಾಡಿಕೊಳ್ಳಲು ಆಗುವುದಿಲ್ಲ. ಇದು ಸಾಧ್ಯವಾಗಬೇಕಾದರೆ ಮೊದಲು ಈ ಕ್ಷೇತ್ರಗಳು ಪ್ರಸ್ತಾಪಿ

ಸುವ ಮುಖ್ಯ ಪ್ರಶ್ನೆಗಳನ್ನೂ ಅವುಗಳ ಪೂರ್ವಾಗ್ರಹಗಳನ್ನೂ ಕೆದಕಿ ನೋಡುವುದು ಅಗತ್ಯ. ಈ ತಯಾರಾತ್ಮಕ ಕೆಲಸದೆಡೆಗಷ್ಟೇ ಇಲ್ಲಿ ದೃಷ್ಟಿ ಹರಿಸೋಣ.

ಸ್ವಾತಂತ್ರ್ಯಪೂರ್ವ ಹಾಗೂ ಸ್ವಾತಂತ್ರ್ಯಾನಂತರದ ದಶಕಗಳಲ್ಲಿ ಮಹಿಳಾ ಪ್ರಶ್ನೆಯು ಪಡೆದುಕೊಂಡ ಸ್ವರೂಪವನ್ನು ದಾಖಲಿಸುವ ಕಾರ್ಯ ಈಗಾಗಲೇ ನಡೆದಿರುವುದರಿಂದ, ಆ ಬೆಳವಣಿಗೆಗಳನ್ನು ಇಲ್ಲಿ ಪುನರುಚ್ಚರಿಸುವುದು ಅನಗತ್ಯವೆಂದು ತೋರುತ್ತದೆ. ಆದರೂ, ಸ್ವಾತಂತ್ರ್ಯಾನಂತರದ ಸಂದರ್ಭದಲ್ಲಿ, ಅಸಮಾನತೆಯ ಪ್ರಶ್ನೆಯನ್ನು ಮಹಿಳಾ ಚಳವಳಿಯು ಇನ್ನಷ್ಟು ಧೃಢವಾಗಿ ಮುಂದಿಟ್ಟಿತು ಎನ್ನುವ ಅಂಶವನ್ನು ಇಲ್ಲಿ ಸ್ಮರಿಸಬಹುದು. ಭಾರತದಲ್ಲಿನ ಮಹಿಳಾ ಅಧ್ಯಯನದ ಉಗಮವು ಈ ಹಿನ್ನೆಲೆಯಲ್ಲಿ ಹೆಚ್ಚು ಅರ್ಥಪೂರ್ಣವಾಗುತ್ತದೆ. ಹೆಣ್ಣು ಗಂಡಿನ ನಡುವಿನ ಅಸಮಾನತೆ ಮತ್ತು ಅದರ ಸಮಸ್ಯೆಗಳನ್ನು ವಿಶ್ಲೇಶಿಸಿ, ಹೆಣ್ಣಿನ ಸಾಮಾಜಿಕ ಸ್ಥಾನಮಾನದಲ್ಲಿ ಬದಲಾವಣೆ ತರುವುದೇ ಮಹಿಳಾ ಅಧ್ಯಯನದ ಮುಖ್ಯ ಉದ್ದೇಶವಾಯಿತು. ಮಹಿಳಾ ಅಧ್ಯಯನದ ಪ್ರಮುಖ ಚಿಂತನಕಾರ್ತಿಯರಲ್ಲಿ ಒಬ್ಬರಾದ ವೀಣಾ ಮಜೂಂದಾರರ ಪ್ರಕಾರ, ಹಲವು ಸ್ತರಗಳಲ್ಲಿ ಅದು ತನ್ನ ಕಾರ್ಯ ನಿರ್ವಹಿಸಬೇಕು :

1. ಸಾಮಾಜಿಕ ಬದುಕಿಗೆ ಮಹಿಳೆಯ ಕೊಡುಗೆಯ ನಿರೂಪಣೆ,

2. ತನ್ನ ಜೀವನ, ಸಾಮಾಜಿಕ ಸಂದರ್ಭ, ಹೋರಾಟ ಮತ್ತು ಆಶೋತ್ತರಗಳನ್ನು ಹೆಣ್ಣು ಹೇಗೆ ಕಾಣುತ್ತಾಳೆ ಎನ್ನುವುದರ ವರ್ಣನೆ.

3. ಸಮಾಜ ಮತ್ತು ಸಾಮಾಜಿಕ ಅಧ್ಯಯನಗಳಲ್ಲಿ ಹೆಣ್ಣಿನ ಪಾತ್ರವನ್ನು ಅದೃಶ್ಯವಾಗಿಸಿರುವ ಅಸಮಾನತೆಯ ಬೇರುಗಳ ವಿಶ್ಲೇಷಣೆ.

ಸಾಮಾಜಿಕ, ಆರ್ಥಿಕ ಕ್ಷೇತ್ರಗಳಲ್ಲಿ ಹೆಣ್ಣಿನ ಸ್ಥಾನ ಮತ್ತು ಅಸಮಾನ ಲಿಂಗಾಧರಿತ ರಚನೆಯ ಶೋಧ–ಈ ಕಾಳಜಿಗಳು ಮಹಿಳಾ ಅಧ್ಯಯನದ ಸ್ವರೂಪವನ್ನು ನಿರ್ಧರಿಸಿವೆ. ಇತ್ತೀಚಿನ ವರ್ಷಗಳಲ್ಲಂತೂ ಹೆಂಗಸಿಗೆ ಸಂಬಂಧಿಸಿದ, ವಿಸ್ತಾರವೆಂದೇ ಕರೆಯಬಹುದಾದ, ಅಧ್ಯಯನ ಸಾಹಿತ್ಯವು ಪ್ರಕಟವಾಗುತ್ತಿದೆ. ಇವುಗಳಲ್ಲಿ ಹಲವು ಸಮಾಜ ಶಾಸ್ತ್ರೀಯ ದೃಷ್ಟಿಕೋನವನ್ನು ಪಡೆದಿದ್ದರೆ, ಕೆಲವು ಅರ್ಥ ಶಾಸ್ತ್ರದ ಚೌಕಟ್ಟಿನಿಂದ ಹೊರಹೊಮ್ಮಿವೆ. (ಇಂತಹ ಬರವಣಿಗೆಯ ಮೊತ್ತದ ಮುಕ್ಕಾಲು ಪಾಲಿನಷ್ಟು ಇಂಗ್ಲೀಷಿನಲ್ಲೇ ಉಳಿದಿರುವುದು ಸಂಕಟದ ಸಂಗತಿ. ಉದಾಹರಣೆಗೆ, ಸಮಾಜಶಾಸ್ತ್ರೀಯ ದೃಷ್ಟಿಕೋನವನ್ನು ಬಳಸುವ ಮಹಿಳಾ ಅಧ್ಯಯನಗಳು ಕನ್ನಡದಲ್ಲಿ ಬಂದಿರುವುದು ಎಲ್ಲೋ ಕೆಲವು. ಈ ಮಾತು ಕನ್ನಡಕ್ಕೆ ಮಾತ್ರ ಸೀಮಿತವಾಗಿರದೆ, ಇತರ ಪ್ರಾಂತೀಯ ಭಾಷೆಗಳಿಗೂ ಅನ್ವಯಿಸಬಹುದು. ಇಂಥ ಪರಿಸ್ಥಿತಿಗೆ ಹಲವು ಕಾರಣಗಳಿವೆ. ಅವುಗಳ ಚರ್ಚೆಗೆ ಇದು ಜಾಗವಲ್ಲದಿದ್ದರೂ ಈ ಅಂಶವನ್ನು ಗುರುತಿಸುವುದು ಅಗತ್ಯ.) ಈ ಬರವಣಿಗೆಯನ್ನು ಓದುತ್ತಾ ಬಂದಂತೆ, ಎರಡು ಸ್ಪಷ್ಟ ಒತ್ತುಗಳನ್ನು ಕಾಣುತ್ತೇವೆ. ಆಗಲೇ ಸೂಚಿಸಿದಂತೆ, ಒಂದು, ಆಧುನೀಕರಣ ಮತ್ತು ಸಾಮಾಜಿಕ ಬದಲಾವಣೆಯ ಸಂದರ್ಭದಲ್ಲಿ ವಿಶ್ಲೇಶಿಸಲಾಗಿರುವ ಲಿಂಗಾಧರಿತ ಅಸಮಾನತೆಯ ಅಧ್ಯಯನ. ಎರಡನೆಯದು, ಸ್ತ್ರೀತ್ವದ ಸಾಂಸ್ಕೃತಿಕ, ಸಾಂಕೇತಿಕ ಅರ್ಥಗಳನ್ನು ಶೋಧಿಸುವ ಪ್ರಯತ್ನ. ಇದರಲ್ಲಿ ಅಸಮಾನತೆಯ ಪ್ರಸ್ತಾಪಗಳಿರುವುದು ಬಹಳ ಅಪರೂಪ.

### ಅಸಮಾನತೆಯ ಚೌಕಟ್ಟು

ಈ ಚೌಕಟ್ಟಿನೊಳಗಿನಿಂದ ರೂಪಿತವಾಗಿರುವ ಸ್ತ್ರೀ-ಸಂಬಂಧಿತ ಅಧ್ಯಯನಗಳನ್ನು ಸಂಗ್ರಹವಾಗಿ ವೀಕ್ಷಿಸಿದಾಗ, ಭಾರತದ ಆರ್ಥಿಕ ಅಭಿವೃದ್ಧಿಯು ಸಮಸ್ಯೆಯಾಗಿ ನಮ್ಮ ಮುಂದೆ ನಿಲ್ಲುತ್ತದೆ. ಅಭಿವೃದ್ಧಿ ಕಾರ್ಯಗಳಲ್ಲಿ ಮಹಿಳೆಯರು ಪಾಲ್ಗೊಳ್ಳಲು ಅಗತ್ಯವಾಗುವ ಮಾಹಿತಿಯನ್ನು ಒಟ್ಟುಗೂಡಿಸುವುದು ಕೆಲವು ಅಧ್ಯಯನಗಳ ಉದ್ದೇಶವಾದರೆ, ಮತ್ತೆಕೆಲವು ಮಹಿಳೆಯ ಮೇಲೆ ಅಭಿವೃದ್ಧಿಯು ಬೀರುವ ವಿವಿಧ ಬಗೆಯ ಪರಿಣಾಮಗಳನ್ನು ದಾಖಲಿಸುತ್ತವೆ. ಆರ್ಥಿಕ ಬೆಳವಣಿಗೆಯು ಪ್ರಚೋದಿಸುವ ಸಾಮಾಜಿಕ ಬದಲಾವಣೆ, ಸ್ತ್ರೀಗೆ ಅದು ಒಡ್ಡುವ ಸವಾಲು ; ಅಭಿವೃದ್ಧಿ ಯೋಜನೆಗಳಲ್ಲಿರುವ ರಚನಾತ್ಮಕ ಅಸಮಾನತೆ; ಹೆಣ್ಣಿನ ಸ್ಥಾನವನ್ನು ಉತ್ತಮಗೊಳಿಸುವಲ್ಲಿ ಸರಕಾರಿ ಹಾಗೂ ಸ್ವಯಂಸೇವಾ ಸಂಸ್ಥೆಗಳು ವಹಿಸುವ ಪಾತ್ರ–ಇತ್ಯಾದಿ ವಿಷಯಗಳ ಬಗ್ಗೆ ಕೂಡ ಅಧ್ಯಯನ ನಡೆದಿದೆ. ಇವುಗಳ ಮುಖ್ಯ ಉದ್ದೇಶ; ರಾಷ್ಟ್ರದ ಆರ್ಥಿಕ ಬೆಳವಣಿಗೆಯ ಸಂದರ್ಭದಲ್ಲಿ ಹೆಣ್ಣಿನ ಸಾಮಾಜಿಕ ಸ್ಥಾನದ ವಿಶ್ಲೇಷಣೆ. ಈ ಉದ್ದೇಶಕ್ಕೆ ಪೂರಕವಾಗಿ, ಆಧುನೀಕರಣವು ಹೆಂಗಸಿನ ಕೌಟುಂಬಿಕ, ಸಾಮಾಜಿಕ, ಆರ್ಥಿಕ

ಜೀವನದಲ್ಲಿ ತಂದಿರುವ ಬದಲಾವಣೆಗಳನ್ನು ಐತಿಹಾಸಿಕ ದೃಷ್ಟಿಯಿಂದ ಅಥವಾ ಕೇವಲ ವಿವರಣಾತ್ಮಕವಾಗಿ ಗುರುತಿಸಲಾಗಿದೆ. ಆಧುನೀಕರಣದ ಸಂದರ್ಭದಲ್ಲಿ ಹೆಚ್ಚು ವಿಕಾರವಾಗಿ ಕಾಣುವ ಹಲವು ಘರ್ಷಣಾತ್ಮಕ ಸನ್ನಿವೇಶಗಳನ್ನು-ಮುಖ್ಯವಾಗಿ ವರದಕ್ಷಿಣೆಯ ಸಮಸ್ಯೆ, ಹೆಂಗಸರು ಒಳಗಾಗುವ ವಿವಿಧ ಬಗೆಯ ಮಾನಸಿಕ ಮತ್ತು ದೈಹಿಕ ಹಿಂಸಾಚಾರ, ಒಂಟಿಯಾಗಿ ಬದುಕ ಬೇಕಾಗುವ ಹೆಣ್ಣಿನ ಸಮಸ್ಯೆ, ಸ್ತ್ರೀ ಶಿಕ್ಷಣ, ಆಸ್ತಿ ಹಕ್ಕು, ದುಡಿಯುವ ಮಹಿಳೆ ಎದುರಿಸುವ ಸಮಸ್ಯೆಗಳು, ಮತ್ತಿತರ ವಿಷಯಗಳನ್ನು ವಿವೇಚಿಸಲಾಗಿದೆ. ಇವೆಲ್ಲವನ್ನು ಒಟ್ಟಿಗೆ ಬೆಸೆಯುವ ಸಮಾನ ಅಂಶವೆಂದರೆ ಆಧುನೀಕರಣ, ಅದು ಪುಷ್ಟಿಸುವ ಆರ್ಥಿಕ ಅಸಮಾನತೆ ಮತ್ತು ಸಾಮಾಜಿಕ ದಬ್ಬಾಳಿಕೆ.

ಅಸಮಾನತೆಯು ಈ ದಾಖಲೆಗಳಲ್ಲಿ ಅತ್ಯಂತ ಜನಪ್ರಿಯವಾದ ಅಧ್ಯಯನ ವಸ್ತು–ಹೆಣ್ಣು ಮತ್ತು ದುಡಿಮೆ. ಅದರಲ್ಲೂ ಗ್ರಾಮೀಣ ಮಹಿಳೆಗೆ ಸಂಬಂಧಿಸಿದಂತೆ, ಅಭಿವೃದ್ಧಿಯ ಅನಪೇಕ್ಷಿತ ಪರಿಣಾಮಗಳನ್ನು ಗುರುತಿಸುವ ಅಧ್ಯಯನಗಳು ಹಲವು ಹೆಂಗಸಿನ ದುಡಿಮೆಯ ಪುನರ್ ವಿವೇಚನೆ ನಡೆಯ ಬೇಕೆಂಬುದೇ ಇವುಗಳ ಒತ್ತಾಯ. ಹೆಣ್ಣು ಕೈಗೊಳ್ಳುವ ಕೆಲಸಗಳ ಸ್ವರೂಪ ಮತ್ತು ಪರಿಸ್ಥಿತಿಗಳನ್ನು ದಾಖಲಿಸಬೇಕು, ಆಗ ಮಾತ್ರ ಸ್ತ್ರೀ ಶ್ರಮದ ಪರಿಕಲ್ಪನೆಯನ್ನು ಪುನಃ ತಿದ್ದಿ ರೂಪಿಸುವುದು ಸಾಧ್ಯ, ಪ್ರಸ್ತುತ ಸಂದರ್ಭದಲ್ಲಿ ಸ್ತ್ರೀ ಶ್ರಮವು ಹಲವಾರು ಆಯಾಮಗಳನ್ನು ಪಡೆದಿದ್ದು, ಅದನ್ನು ಆರ್ಥಿಕತೆಯ ಸಂಕುಚಿತ ದೃಷ್ಟಿಯಿಂದ ನೋಡಲು ಅಸಾಧ್ಯ. ಅವಳ ಮನೆಗೆಲಸ, ಕುಟುಂಬದಲ್ಲಿ, ವ್ಯವಸಾಯ ಕ್ಷೇತ್ರದಲ್ಲಿ ಆಕೆ ನಿರ್ವಹಿಸುವ ಕೆಲಸ-ಇವುಗಳನ್ನು 'ವರಮಾನ'ದ ಪರಿಭಾಷೆಯಲ್ಲಿ ಅರ್ಥೈಸಲಾಗದು. ಅಂದರೆ, ವರಮಾನವನ್ನು ಒದಗಿಸುವ ಕೆಲಸವನ್ನಷ್ಟೇ 'ದುಡಿಮೆ' ಎಂದು ಪರಿಗಣಿಸಿದರೆ, ಸ್ತ್ರೀ ಕಾರ್ಯಕ್ಷೇತ್ರವನ್ನು ಬಹುಷಃ ಸಂಪೂರ್ಣವಾಗಿ ಮರೆಸಿಬಿಡುತ್ತೇವೆ. ಈ ತಪ್ಪು ಕಲ್ಪನೆಯಿಂದಾಗಿ, ರಾಷ್ಟ್ರೀಯ ಉತ್ಪಾದನೆಗೆ ಸಂಬಂಧಿಸಿದ ಅಂಕಿ ಅಂಶಗಳಲ್ಲೂ ಮತ್ತು ಸಾಮಾಜಿಕ ಪ್ರಜ್ಞೆಯಲ್ಲೂ ಹೆಣ್ಣಿನ ಕೆಲಸದ ಮಹತ್ವವು ಕ್ಷೀಣಿಸಿದೆ. ಅದು ಕೇವಲ ಗಂಡಸಿನ ಕೆಲಸಕ್ಕೆ ಪೂರಕವಾದದ್ದು ಎಂದು ಕಾಣಲಾಗಿದೆ. ಈ ಅಭಿಪ್ರಾಯಗಳು ನಮ್ಮ ಅಭಿವೃದ್ಧಿಯ ಯೋಜನೆಗಳನ್ನೂ ಹೊಕ್ಕಾಗ ಹೆಣ್ಣಿನ ಮೇಲೆ ಉಂಟಾಗುವ ಪರಿಣಾಮಗಳನ್ನು ಊಹಿಸುವುದು ಕಷ್ಟವಲ್ಲ. ಒಟ್ಟಿನಲ್ಲಿ ಹೇಳುವುದಾದರೆ, ಸಾಮಾಜಿಕ-ಆರ್ಥಿಕ ಅಭಿವೃದ್ಧಿಯ ಹಲವು ಯೋಜನೆಗಳು ಹೆಂಗಸಿನ ಅಗತ್ಯತೆಗಳ ಕಡೆಗೆ ಗಮನ ಹರಿಸಿಲ್ಲ. ಅದರಲ್ಲೂ, ಗ್ರಾಮೀಣ ಪ್ರದೇಶಗಳಲ್ಲಿ ಆಧುನಿಕ ತಂತ್ರಜ್ಞಾನ ಸ್ವಲ್ಪಮಟ್ಟಿಗೆ ಪ್ರವೇಶಿಸಿರುವುದರಿಂದ, ಇದನ್ನು ಉಪಯೋಗಿಸಲು ಅರಿಯದ ಹೆಣ್ಣು ಹೆಚ್ಚಾಗಿ ಕೂಲಿಗೆಲಸವನ್ನೇ ಅವಲಂಬಿಸಬೇಕಾದ ಪರಿಸ್ಥಿತಿ ಬಂದಿದೆ. ಉತ್ಪಾದನಾ ಸಾಧನಗಳ ಮೇಲಿನ ಅವಳ ನಿಯಂತ್ರಣ ಇನ್ನಷ್ಟು ಸಡಿಲಗೊಂಡಿದೆ. ಹೀಗಾಗಿ, ಆಧುನೀಕರಣದ ಹಾದಿಯು ಮಹಿಳೆಯ (ವಿಶೇಷವಾಗಿ ಗ್ರಾಮೀಣ ಹೆಣ್ಣಿನ) ಸ್ಥಾನಕ್ಕೆ ಮಾರಕವಾಗಿ ಪರಿಣಮಿಸಿದೆ.

ಸ್ತ್ರೀ ಶ್ರಮದ ಬದಲಾಗುತ್ತಿರುವ ಸ್ವರೂಪವನ್ನು ದಾಖಲಿಸುವುದರ ಜತೆಗೇ, ಸಾಮಾಜಿಕ/ಆರ್ಥಿಕ 'ಪ್ರಗತಿ'ಯು ಸೃಷ್ಟಿಸಿರುವ ಇತರ ಲಿಂಗಾಧಾರಿತ ಅಸಮಾನತೆಗಳನ್ನೂ ಮಹಿಳಾ ಚಳವಳಿ ಹಾಗೂ ಮಹಿಳಾ ಅಧ್ಯಯನಗಳು ಗುರುತಿಸಿವೆ. ವರದಕ್ಷಿಣೆ, ಕಾನೂನು, ಆಸ್ತಿ ಹಕ್ಕು ಇತ್ಯಾದಿ ವಿಷಯಗಳನ್ನು ಹೊಸ ದೃಷ್ಟಿಯಲ್ಲಿ ವಿಶ್ಲೇಷಿಸುವ ಪ್ರಯತ್ನಗಳು ಇಲ್ಲಿ ಮುಖ್ಯವಾಗುತ್ತವೆ. ಹೆಣ್ಣಿನ ಶೋಷಿತ ಬದುಕನ್ನು ಅರ್ಥೈಸಲು ಹಿಂದಿನಿಂದಲೂ ಸಾಂಸ್ಕೃತಿಕ ಹಾಗೂ ಸಾಮಾಜಿಕ ಮೌಲ್ಯಗಳಿಗೆ ಹೆಚ್ಚಿನ ಒತ್ತುಕೊಡುತ್ತಾ ಬಂದಿದ್ದೇವೆ ; ಆದರೆ, ನಮ್ಮ ವಿಚಾರ–ನಂಬಿಕೆಗಳನ್ನು ವಿಮರ್ಶೆಗೆ ಗುರಿಮಾಡುವುದರ ಜತೆಗೇ, ಶೋಷಣೆಯ ಆರ್ಥಿಕ ಮೂಲಗಳನ್ನೂ ಶೋಧಿಸಿ, ತಿದ್ದುವುದು ಅಗತ್ಯವೆಂಬ ವಾದ ಇಲ್ಲಿದೆ.

## ಸಾಂಸ್ಕೃತಿಕ ಚೌಕಟ್ಟು

ಅಸಮಾನತೆಯು ಕೇಂದ್ರವಾಗಿರುವ ಅಧ್ಯಯನಗಳಿಗಿಂತ ಭಿನ್ನವಾದ ದಾಟಿಯಲ್ಲಿ ಆಲೋಚಿಸುವ ಮತ್ತೊಂದು ಸಮಾಜಶಾಸ್ತ್ರೀಯ ದೃಷ್ಟಿಕೋನವು 'ಸ್ತ್ರೀತ್ವ'ದ ಪ್ರಶ್ನೆಯನ್ನು ಸಂಸ್ಕೃತಿ-ಸಾಂಕೇತಿಕತೆಯ ಪರಿಭಾಷೆಯ ಸಹಾಯದೊಂದಿಗೆ ಚರ್ಚಿಸುತ್ತದೆ. 'ಸ್ತ್ರೀತ್ವ'ದ ಸ್ವರೂಪವು ನಿರ್ದಿಷ್ಟ ಸಾಮಾಜಿಕ ಸನ್ನಿವೇಶಗಳಲ್ಲಿ ಸೃಷ್ಟಿಯಾಗುವುದೆಂದು ಧೃಡವಾಗಿ ನಂಬುವ ಈ ಎಳೆಯು, ಭಾಷೆ, ಸಂಸ್ಕೃತಿ ಮತ್ತು ಸಾಂಕೇತಿಕ ಅರ್ಥಕ್ಕೆ ಹೆಚ್ಚು ಮಹತ್ವ

ನೀಡುತ್ತದೆ. ಸ್ತ್ರೀತ್ವದ ಸಾಂಕೇತಿಕ ಅರ್ಥವನ್ನು ಬಿಡಿಸುತ್ತಾ ಹೋದಂತೆ, ಅದರಲ್ಲಿ ಆ ಸಂಸ್ಕೃತಿಯ ಸಾರಾಂಶವನ್ನು ಗುರುತಿಸಬಹುದು ಎನ್ನುವುದು ಇದರ ವಾದ. ಈ ವಾದವನ್ನು ಸಮರ್ಥಿಸಿಕೊಳ್ಳಲು ವಿಶೇಷವಾಗಿ ವಿವಾಹ (ಅದು ಸೂಚಿಸುವ ಸಾಂಕೇತಿಕ ಅರ್ಥಗಳು), ಧಾರ್ಮಿಕ ಆಚರಣೆಗಳು ಮತ್ತು ಸ್ತ್ರೀ-ಸಂಬಂಧಿತ ಮೌಲ್ಯಗಳನ್ನು ಅಧ್ಯಯನ ಮಾಡಲಾಗಿದೆ.

---

ಪ್ರಸ್ತುತ ಸಂದರ್ಭದಲ್ಲಿ ಸ್ತ್ರೀ ಶ್ರಮವು ಹಲವಾರು ಆಯಾಮಗಳನ್ನು ಪಡೆದಿದ್ದು, ಅದನ್ನು ಆರ್ಥಿಕತೆಯ ಸಂಕುಚಿತ ದೃಷ್ಟಿಯಿಂದ ನೋಡಲು ಅಸಾಧ್ಯ. ಅವಳ ಮನೆಗೆಲಸ, ಕುಟುಂಬದಲ್ಲಿ, ವ್ಯವಸಾಯ ಕ್ಷೇತ್ರದಲ್ಲಿ ಆಕೆ ನಿರ್ವಹಿಸುವ ಕೆಲಸ-ಇವುಗಳನ್ನು 'ವರಮಾನ'ದ ಪರಿಭಾಷೆಯಲ್ಲಿ ಅರ್ಥೈಸಲಾಗದು. ಅಂದರೆ, ವರಮಾನವನ್ನು ಒದಗಿಸುವ ಕೆಲಸವನ್ನಷ್ಟೇ 'ದುಡಿಮೆ' ಎಂದು ವರ್ಗೀಕರಿಸಿದರೆ, ಸ್ತ್ರೀ ಕಾರ್ಯಕ್ಷೇತ್ರವನ್ನು ಬಹುಷಃ ಸಂಪೂರ್ಣವಾಗಿ ಮರೆಸಿಬಿಡುತ್ತೇವೆ.

---

ವಿವಾಹ ಸಂದರ್ಭದಲ್ಲಿ ಹೆಣ್ಣನ್ನು ಕೊಡುವ-ಸ್ವೀಕರಿಸುವ ಪ್ರಕ್ರಿಯೆಗಳು ನಮ್ಮ ಸಂಸ್ಕೃತಿಯ 'ಹೆಣ್ಣಿನ' ಪರಿಕಲ್ಪನೆಯನ್ನು ಅವಲಂಬಿಸಿದೆ, ಮತ್ತು ಅದನ್ನು ರೂಪಿಸುತ್ತದೆ ಕೂಡ. ಹೆಣ್ಣನ್ನು ಕೊಡುತ್ತಿರುವ ಹಾಗೂ ಸ್ವೀಕರಿಸುತ್ತಿರುವ ಮನೆತನಗಳ ನಡುವೆ ಸ್ಥಾಪಿತವಾಗುವ ಅಂತರ, ಅಸಮಾನತೆ : ಕುಟುಂಬದ ಸದಸ್ಯರ ನಡುವೆ ರೂಪಗೊಳ್ಳುವ ಸಂಬಂಧಗಳ ಸ್ವರೂಪ ; ವಿವಾಹದ ಆಚರಣೆಗಳಲ್ಲಿ ಹುದುಗಿಕೊಂಡಿರುವ ಹೆಣ್ಣುತನದ ಬಗೆಗಿನ ವಿಚಾರಗಳು ; ಸಮಾಜದಲ್ಲಿನ ಹೆಣ್ಣಿನ ಪಾತ್ರವನ್ನು ಅವು ಪ್ರತೀಕರಿಸುವ ರೀತಿ ; ಸಾಮಾಜಿಕ ರಚನೆ, ಸ್ತ್ರೀ-ಪುರುಷ ಭಿನ್ನತೆಗಳು....ಎಷ್ಟೋ ಬಗೆಯ ವಿಷಯಗಳು ಈ ಅಧ್ಯಯನಗಳಲ್ಲಿ ಬರುತ್ತವೆ. ಇಂಥ ವಿಭಿನ್ನ ಸಾಂಸ್ಕೃತಿಕ ನೆಲೆಗಳು ಹಾಗೂ ನಂಬಿಕೆ ಕಲ್ಪನೆಗಳು 'ಸ್ತ್ರೀತ್ವ' ಮತ್ತು ಪುರುಷತ್ವದ ಸ್ವರೂಪವನ್ನು ರೂಪಿಸುವುದರಲ್ಲಿ ಸಹಾಯಕವಾಗಿವೆ.

ಹೆಂಗಸಿಗೆ ಸಂಬಂಧಿಸಿದ ಮೌಲ್ಯಗಳನ್ನು, ಆಚಾರ-ವಿಚಾರಗಳನ್ನು ವೀಕ್ಷಿಸಿದಾಗಿ ಹೆಣ್ಣುತನವನ್ನು ಆವರಿಸಿರುವ ಮತ್ತಷ್ಟು ಮುಸುಕುಗಳು ಗೋಚರವಾಗುತ್ತವೆ. ಉದಾಹರಣೆಗೆ, 'ಸ್ತ್ರೀ' ಎಂಬ ಪ್ರಧಾನ ಪರಿಕಲ್ಪನೆಯಿಂದ ಕನ್ಯೆ, ಮುತ್ತೈದೆ, ತಾಯಿ, ವಿಧವೆ, ಇತ್ಯಾದಿ ಸಾಂಸ್ಕೃತಿಕ ಉಪ ಪಾತ್ರಗಳು ಹುಟ್ಟಿಕೊಂಡಿವೆ. ಹಿಂದೂಗಳ ಲೋಕದೃಷ್ಟಿಯಲ್ಲಿ 'ಸ್ತ್ರೀತ್ವವನ್ನು ಗುರುತಿಸಬೇಕಾದರೆ ಈ ಪಾತ್ರಗಳ ಮೂಲಕವೇ ಸಾಧ್ಯ. ಕನ್ಯೆಯ ಪರಿಕಲ್ಪನೆಯಲ್ಲಿ ಹೆಣ್ಣು ಕುಮಾರಿಯಾಗಿದ್ದು, ಜತೆಗೇ ವಿವಾಹದ ಸಾಧ್ಯತೆಗಳನ್ನು ಹೊಂದಿರುತ್ತಾಳೆ ; ಪತ್ನಿಯ ಮುಖ್ಯ ಗುಣ 'ಪಾತಿವ್ರತ್ಯ' ವಾದರೆ, ಸೌಭಾಗ್ಯವತಿ ಅಥವಾ ಮುತ್ತೈದೆಯ ಪಾತ್ರವು ತಾಯ್ತನದ ಸಾಧ್ಯತೆಯನ್ನು ನಿಜವಾಗಿಸುತ್ತದೆ ; ಹಾಗೇ ಲೈಂಗಿಕತೆ ಆಧಾರವಾಗಿರುವ ಸ್ತ್ರೀತ್ವವನ್ನೂ ಅದರೊಟ್ಟಿಗೆ ಸಾಮಾಜಿಕ ಸ್ಥಾನಮಾನವನ್ನೂ ವೈಧವ್ಯವು ಕಳೆದುಕೊಳ್ಳುತ್ತದೆ. ಈ ಅಂಶಗಳನ್ನು ನಮ್ಮ ಸಮಾಜ-ಸಂಸ್ಕೃತಿಗಳ ಆಚಾರ-ವಿಚಾರಗಳ ಹಿನ್ನೆಲೆಯೊಂದಿಗೆ ಅರ್ಥಮಾಡಿಕೊಳ್ಳಬೇಕು. ಹೆಣ್ಣಿನ ಪಾವಿತ್ರ್ಯ, ಅವಳ ಕುಟುಂಬ ಮತ್ತು ಜಾತಿಯ ಮರ್ಯಾದೆ, ಸ್ಥಾನಮಾನಗಳನ್ನು ನಿರ್ಧರಿಸುವ ಮಾನದಂಡವಾಗುತ್ತದೆ.

ಈ ಬಗೆಯ ಸಾಂಸ್ಕೃತಿಕ ಮೌಲ್ಯಗಳನ್ನು, ನಂಬಿಕೆಗಳನ್ನು ಹೆಣ್ಣು ಹೇಗೆ ತನ್ನದಾಗಿಸಿಕೊಳ್ಳುತ್ತಾಳೆ ಎಂಬುದರ ಕಡೆಗೂ ಗಮನಹರಿಸಲಾಗಿದೆ. ಸಮಾಜೀಕರಣದ ಈ ಪ್ರಕ್ರಿಯೆಯನ್ನು ವಿಶ್ಲೇಷಿಸುವಲ್ಲಿ ಧಾರ್ಮಿಕ ಆಚರಣೆಗಳು ವಿಶೇಷ ಅಧ್ಯಯನಕ್ಕೊಳಗಾಗಿವೆ. ಹೆಣ್ಣಿನ ಸ್ವರೂಪ, ಸ್ಥಾನ, ವರ್ತನೆಗಳಿಗೆ ಸಂಬಂಧಿಸಿದ ಸಾಮಾಜಿಕ ಮೌಲ್ಯಗಳನ್ನು ನಮ್ಮ ಆಚರಣೆಗಳು ಮೂರ್ತಿಸುವ ವಿಚಾರಗಳಲ್ಲಿ ಕಾಣಬಹುದು. ಉದಾಹರಣೆಗೆ, ಹಿಂದೂ ಮತಾಚರಣೆಗಳೊಂದಿಗೆ ಬೆಸೆದುಕೊಂಡಿರುವ ಪುರಾಣ ಕಥೆಗಳನ್ನು ಕೇಳಿದಾಗ, ಅಥವಾ ವಿವಿಧ ಆಚರಣೆಗಳ (ಮತ್ತು ಅಲ್ಲಿ ಬಳಸುವ ಪೂಜಾ ಸಾಮಗ್ರಿಗಳ) ಸಾಂಕೇತಿಕತೆಯ ಕಡೆ ಗಮನಹರಿಸಿದಾಗ, ಒಂದಲ್ಲ ಒಂದು ರೀತಿಯಲ್ಲಿ ಅವು ಸ್ತ್ರೀ-ಪುರುಷತ್ವದ ನಿರ್ದಿಷ್ಟ ಪರಿಕಲ್ಪನೆಯನ್ನು ಆಧರಿಸಿರುವುದು ಸ್ಪಷ್ಟವಾಗುತ್ತದೆ. ಹಾಗೆಯೇ ಭಾರತೀಯ ಹಿಂದೂ ಸಂಸ್ಕೃತಿಯಲ್ಲಿ ಸ್ತ್ರೀತ್ವವು ಹೊಂದಿರುವ ದ್ವಿಮುಖ ಆಯಾಮಗಳನ್ನೂ ವಿಶೇಷ ಚರ್ಚೆಗೆ ಗುರಿಪಡಿಸಲಾಗಿದೆ. ಇಲ್ಲಿ, 'ಸತಿ-ಶಕ್ತಿ' ಎರಡೂ ಗುಣಗಳೂ ತಮ್ಮದೇ ಆದ ಸ್ಥಾನ ಪಡೆದಿದ್ದು, ಸ್ತ್ರೀತ್ವದ ಪರಿಕಲ್ಪನೆಯ ಎರಡು ಧ್ರುವಗಳಾಗುತ್ತವೆ. 'ಸ್ತ್ರೀತ್ವವು ಎಷ್ಟರ ಮಟ್ಟಿಗೆ ಈ ಧ್ರುವಗಳ ನಡುವೆಯೇ ಬಂಧಿತವಾಗಿ ಉಳಿದಿದೆ ಎಂದು ಪರಿಶೀಲಿಸಲು, ವಿಶೇಷವಾಗಿ ಹೆಣ್ಣು ದೇವರುಗಳಿಗೇ ಮೀಸಲಾದ ಹಬ್ಬ, ಜಾತ್ರೆಗಳು, ಅವು ಒಳಗೊಂಡಿರುವ

ಹೆಣ್ಣುತನದ ಪರಿಕಲ್ಪನೆ, ಆ ಸಂದರ್ಭದಲ್ಲಿ ಹೆಂಗಸರು ನಿರ್ವಹಿಸುವ ಪಾತ್ರ–ಇತ್ಯಾದಿ ವಿವರಗಳನ್ನು ಅಧ್ಯಯನ ಮಾಡಲಾಗಿದೆ.

ಇವುಗಳ ಹಿನ್ನೆಲೆಯಲ್ಲಿ: ನಮ್ಮ ಸಂಸ್ಕೃತಿ ಮತ್ತು ಧಾರ್ಮಿಕ ಆಚರಣೆಗಳು ಸಂಕೇತೀಕರಿಸುವ ವಿಚಾರಗಳು ಸ್ತ್ರೀತ್ವದ ಸ್ವರೂಪವನ್ನು ನಿರ್ಧರಿಸುವ ಕಾರ್ಯದಲ್ಲಿ ಪ್ರಧಾನ ಪಾತ್ರ ವಹಿಸಿವೆ ಎಂದರೆ ತಪ್ಪಾಗಲಾರದು. ನಾವು ಆರಾಧಿಸುವ ಹೆಣ್ಣು ದೇವರುಗಳಂತೆಯೇ ಸಮಾಜ ದಲ್ಲಿ ಕೂಡ ಹೆಣ್ಣನ್ನು ದ್ವಿತ್ವಾತ್ಮಕ ರೀತಿಯಲ್ಲಿ ನೋಡ ಲಾಗಿದೆ. ಒಂದು ಮಜಲಿನಲ್ಲಿ ಆಕೆಯು ಎಲ್ಲವನ್ನೂ ರಕ್ಷಿಸುವ, ಪ್ರೇಮಿಸುವ ಆಧಾರವಾದರೆ, ಇನ್ನೊಂದು ಸ್ತರದಲ್ಲಿ ಅವಳು ಮಾರಕ ಶಕ್ತಿಯಾಗಿಯೂ ಪರಿಣಮಿಸ ಬಹುದು. ನಮ್ಮಲ್ಲಿ ಪ್ರಚಲಿತವಾಗಿರುವ ಹೆಣ್ಣು ಮತ್ತು ಪ್ರಕೃತಿಯ ನಡುವಣ ಸಮೀಕರಣ ಮೇಲಿನ ದ್ವಂದ್ವ ದೃಷ್ಟಿಯಿಂದ ಹೆಚ್ಚೇನು ದೂರವಿಲ್ಲದ್ದು. ಸ್ತ್ರೀ/ಶಕ್ತಿ/ಪ್ರಕೃತಿಗಳನ್ನು ಒಂದೇ ನಿಯಮದ ವಿಭಿನ್ನ ರೂಪ ಗಳಾಗಿ ಗುರುತಿಸಿರುವುದು ಹೆಣ್ಣಿಗೆ ಸಂಬಂಧಿಸಿದ ಹಿಂದೂ ಆಚಾರ-ವಿಚಾರಗಳ ಪ್ರಮುಖ ಗುಣ ಎಂದು ಕೆಲವರು ವಾದಿಸಿದ್ದಾರೆ.

* * *

ಆರಂಭದಲ್ಲೇ ಸೂಚಿಸಿದಂತೆ ಒಟ್ಟಾರೆ ವೀಕ್ಷಿಸಿದಾಗ ಸ್ತ್ರೀತ್ವದ ಎಳೆಗಳನ್ನು ಬಿಡಿಸಬಯಸುವ ಬಹುಪಾಲು ಪ್ರಯತ್ನಗಳು ಲಿಂಗ ಅಸಮಾನತೆಯ ಪ್ರಸ್ತಾಪವನ್ನೂ ಮಾಡುವುದಿಲ್ಲ. ಸ್ವಾಯತ್ತ ಕ್ಷೇತ್ರಗಳಂತೆ ಪವಡಿಸುವ ಇವೆರಡೂ ವಿಶ್ಲೇಷಣಾ ಚೌಕಟ್ಟುಗಳ ನಡುವೆ ಸಂವಾದ ಸನ್ನಿವೇಶಗಳು ಇಲ್ಲವೇ ಇಲ್ಲ ಎನಿಸುವಷ್ಟು ವಿರಳ. ಇಂಥ ಮುಖಾಮುಖಿ ಸಾಧ್ಯವಾದಾಗ ಉದ್ಭವಿಸುವ ಶಕ್ತಿಶಾಲಿ ವಿಶ್ಲೇಷಣೆಯ ಒಂದು ಮಾದರಿಯನ್ನು ಲೀಲಾ ದುಬೆ ಅವರ 'ಬೀಜ ಮತ್ತು ಕ್ಷೇತ್ರ' ಲೇಖನದಲ್ಲಿ ಕಾಣುತ್ತೇವೆ (Seed and Earth', ದುಬೆ ಮತ್ತಿತರರು ಸಂಪಾದಿಸಿ ರುವ Visibility and Power ಪುಸ್ತಕದಲ್ಲಿ [Delhi Oford University Press 1986) ಹೆಣ್ಣು-ಗಂಡಿನ ಸಂಬಂಧವನ್ನು ಬೀಜ ಮತ್ತು ಕ್ಷೇತ್ರದ ಉಪಮೆಯೊಂದಿಗೆ ವರ್ಣಿಸುವುದು ಸರ್ವೇಸಾಮಾನ್ಯ. ಆದರೆ ಆ ಉಲ್ಲೇಖವನ್ನು ಅಷ್ಟಕ್ಕೇ ಮೊಟಕುಮಾಡದೆ ಪುರುಷ ಪ್ರಧಾನ ಸಾಮಾಜಿಕ-ಆರ್ಥಿಕ ರಚನೆಯ ಮುಂದುವರಿಕೆಗೆ ಅದು ಹೇಗೆ ಅಗತ್ಯವಾಗುತ್ತದೆ ಎನ್ನುವು ದನ್ನು ತೋರಿಸುತ್ತಾರೆ. ವ್ಯವಸಾಯವನ್ನಾಧರಿಸಿರುವ ಸಮಾಜದಲ್ಲಿ ಹೊಲದ ಒಡೆತನ, ಮತ್ತು ದುಡಿಮೆ ಬಹು ಮುಖ್ಯ ಅಂಶಗಳಾಗುತ್ತವೆ. ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಹೆಣ್ಣು ವಿವಾಹದ ಅನಂತರ ಗಂಡನ ಕುಟುಂಬವನ್ನು ಸೇರಿ, ಅಲ್ಲಿ ತನ್ನ ಕಾರ್ಯ ನಿರ್ವಹಿಸು ತ್ತಾಳೆ. ಈ ಹಿನ್ನೆಲೆಯಲ್ಲಿ 'ಬೀಜ-ಕ್ಷೇತ್ರ'ದ ಮಾತನ್ನು ಅರ್ಥೈಸಿದಾಗ, ಹೆಣ್ಣನ್ನು ಕ್ಷೇತ್ರದೊಂದಿಗೆ ಹೋಲಿಸಿರು ವುದು ಹೆಚ್ಚು ಧ್ವನಿಪೂರ್ಣವಾಗುತ್ತದೆ, ಏಕೆಂದರೆ ಇಲ್ಲಿ ನಿಯಂತ್ರಣಕ್ಕೆ ಒಳಗಾಗುವುದು ಕ್ಷೇತ್ರ. ಹೆಂಗಸಿನ ಸಂತಾನ ದುಡಿಮೆಗಳಿಂದ ಅದೇ ವ್ಯವಸ್ಥೆಯ ಮುಂದುವರಿಕೆಗೆ ಸಹಾಯಕವಾಗುತ್ತದೆ. ಮಹಿಳೆಗೆ ಆಸ್ತಿ, ತನ್ನ ದುಡಿಮೆ ಮತ್ತು ಉತ್ಪಾದನಾ ಪ್ರಕ್ರಿಯೆಯ ಮೇಲೆ ಯಾವ ಹಕ್ಕೂ ಇಲ್ಲದ ಅಸಮಾನ ಸಾಮಾಜಿಕ ರಚನೆಯನ್ನು ಬೀಜಕ್ಷೇತ್ರದ ಮಾತು ಪ್ರತಿಧ್ವನಿಸುತ್ತದೆ.

---

ನಿರ್ದಿಷ್ಟ ಕಾಲ ಮತ್ತು ಪ್ರಾದೇಶಿಕ ಸನ್ನಿವೇಶಗಳಲ್ಲಿ ವಿಶಿಷ್ಟ ರೂಪ ಪಡೆಯುವ ಲಿಂಗ ಅಸಮಾನತೆಯ ದಾಖಲೆ, ಅಧ್ಯಯನ ಗಳು ಈ ಸಂದರ್ಭದಲ್ಲಿ ಅಗತ್ಯ. ಹಾಗೆಯೇ, ಅಸಮಾನತೆಯ ಬೇರುಗಳನ್ನು ಶೋಧಿಸುವಾಗ, ಅದಕ್ಕೆ ಹೆಗಲು ಕೊಟ್ಟು ನಿಂತು ಪೋಷಿಸುತ್ತಿರುವ ಸಾಮಾಜಿಕ-ಸಾಂಸ್ಕೃತಿಕ ಆಚಾರ ವಿಚಾರ ಗಳನ್ನೂ ಸಮನಾಗಿ ಗಮನಿಸಬೇಕು.

---

ಸಮಗ್ರ ದೃಷ್ಟಿಯಿಂದ ನೋಡಿದಾಗ ಅಸಮಾನತೆ ಹಾಗೂ ಸ್ತ್ರೀತ್ವದ ಪರಿಕಲ್ಪನೆಗಳನ್ನು ಒಟ್ಟಿಗೆ ತೂಗಿ ನೋಡುವ ಅಧ್ಯಯನಗಳು ಬೆರಳೆಣಿಕೆಗೂ ಸಿಗದಷ್ಟು ಅಪರೂಪ. ನಮ್ಮಲ್ಲಿ ನಡೆಯುತ್ತಿರುವ ಸ್ತ್ರೀ-ಸಂಬಂಧಿತ ಅಧ್ಯಯನಗಳೆಲ್ಲಾ ಈ ಧೃವೀಕೃತ ಮಾರ್ಗದಲ್ಲಿ ಚಲಿಸು ತ್ತಿರುವಂತಿದೆ. ಇದರಿಂದಾಗುವ ತೊಂದರೆಗಳೆಷ್ಟು ? ಮಹಿಳಾ ಅಧ್ಯಯನದ ಮೇಲೆ ಅದು ಬೀರುವ ಪರಿಣಾಮ ಎಂಥದ್ದು ? ಈ ದಿಸೆಯಲ್ಲಿ ಆಲೋಚಿಸುತ್ತಿದ್ದಂತೆ ಮೊದಲು ಭಾಸವಾಗುವ ಅಂಶ : ಸ್ತ್ರೀತ್ವದ ಸ್ವರೂಪ ಒಂದನ್ನೇ ನಮ್ಮ ಅಧ್ಯಯನದ ವಸ್ತು ಮಾಡಿಕೊಂಡರೆ, ಅದನ್ನು ಎಂದೂ ಬದಲಾಗದ, ಎಲ್ಲ ಪ್ರದೇಶಗಳಿಗೂ ಅನ್ವಯವಾಗುವ ಸಮಾನ ಗುಣ ಎಂದು ತೀರ್ಮಾನಿಸುವ ಸಾಧ್ಯತೆಗಳೇ ಹೆಚ್ಚು. ಇಂಥ ಅನೈತಿಹಾಸಿಕ ವಿಶ್ಲೇಷಣೆ ಯಿಂದ ಲಿಂಗಾಧರಿತ ಸಮಾಜರಚನೆಯನ್ನು ಅರ್ಥಮಾಡಿ

ಕೊಳ್ಳುವ ನಮ್ಮ ಶಕ್ತಿಯೂ ಕಡಿಮೆಯಾಗುತ್ತದೆ. ನಿರ್ದಿಷ್ಟ ಕಾಲ ಮತ್ತು ಪ್ರಾದೇಶಿಕ ಸನ್ನಿವೇಶಗಳಲ್ಲಿ ವಿಶಿಷ್ಟ ರೂಪಪಡೆಯುವ ಲಿಂಗ ಅಸಮಾನತೆಯ ದಾಖಲೆ, ಅಧ್ಯಯನಗಳು ಈ ಸಂದರ್ಭದಲ್ಲಿ ಅಗತ್ಯ. ಹಾಗೆಯೇ, ಅಸಮಾನತೆಯ ಬೇರುಗಳನ್ನು ಶೋಧಿಸುವಾಗ, ಅದಕ್ಕೆ ಹೆಗಲು ಕೊಟ್ಟು ನಿಂತು ಪೋಷಿಸುತ್ತಿರುವ ಸಾಮಾಜಿಕ-ಸಾಂಸ್ಕೃತಿಕ ಆಚಾರ ವಿಚಾರಗಳನ್ನೂ ಸಮನಾಗಿ ಗಮನಿಸಬೇಕು. ಉದಾಹರಣೆಗೆ, ಯಾವುದೇ ಸಮಾಜದ ಆರ್ಥಿಕ ಪ್ರಕ್ರಿಯೆಗಳನ್ನು ಅರ್ಥಮಾಡಿಕೊಳ್ಳಲು ಅಲ್ಲಿನ ಶ್ರಮ ವಿಭಜನೆಯನ್ನು ಗಣನೆಗೆ ತೆಗೆದುಕೊಳ್ಳಲೇಬೇಕು. ಹೆಣ್ಣುಗಂಡಿನ ನಡುವಿನ ಶ್ರಮ ವಿಭಜನೆಯನ್ನು ಕೇವಲ ಅಸಮಾನತೆಯ ಪರಿಭಾಷೆಯಲ್ಲಿ ವಿವೇಚಿಸದೆ, ಅದರ ಜತೆಗೇ, ಆ ವಿಭಜನೆಯ ಶಿಲ್ಪದಲ್ಲೇ ಹೆಣೆದುಕೊಂಡಿರುವ ವಿಚಾರಗಳನ್ನು ಸ್ತ್ರೀ-ಪುರುಷರ ದೇಹ ಶಕ್ತಿ, ರಚನೆ, ಕೌಶಲ್ಯ ಇತ್ಯಾದಿಗಳನ್ನು ಕುರಿತಾದ ಪೂರ್ವಾಪರಗಳನ್ನು ಅರ್ಥೈಸುವುದು ಬಹಳ ಮುಖ್ಯವಾಗುತ್ತವೆ.

ಸ್ತ್ರೀತ್ವದ ಪರಿಕಲ್ಪನೆಯ ವಿಶ್ಲೇಷಣೆ ಮತ್ತು ಲಿಂಗ ಅಸಮಾನತೆಯ ಧೃವೀಕೃತ ವ್ಯಾಖ್ಯಾನ ಚೌಕಟ್ಟುಗಳ ನಡುವಿನ ಸಂವಾದ-ಸಂಬಂಧ ಬೆಳೆಯದಿದ್ದರೆ, ಮಹಿಳಾ ಅಧ್ಯಯನದ ಬೆಳವಣಿಗೆಯೂ ಕುಂಠಿತವಾಗಬಹುದು. ಸ್ತ್ರೀತ್ವವಾಗಲೀ ಅಸಮಾನತೆಯಾಗಲೀ ಏಕರೂಪವಾದ ಸಾರ್ವಕಾಲಿಕ ಗುಣಗಳನ್ನು ಪಡೆದುಕೊಂಡಿಲ್ಲ ; ವಿಭಿನ್ನ ಜಾತಿ–ಪ್ರದೇಶಗಳಲ್ಲಿ ಸ್ತ್ರೀ-ಶೋಷಣೆಯ ಸ್ವರೂಪ ಭಿನ್ನವಾಗಿಯೇ ಇರುತ್ತದೆ. ಅದರ ಎಲ್ಲಾ ಆಯಾಮಗಳನ್ನು ಗ್ರಹಿಸಲು ಸಾಧ್ಯವಾಗಬೇಕಾದರೆ ನಮ್ಮ ಪೂರ್ವಸಿದ್ಧ ವ್ಯಾಖ್ಯಾನ ಮಾದರಿಗಳಿಂದ ಹೊರಬಂದು, ಲಿಂಗ ಭೇದದ ಸ್ಥಳೀಯ ಸ್ವರೂಪವನ್ನು ತೆರೆದಿಡಲು ಸಾಧ್ಯವಾಗಬೇಕು. ಇಂಥ ಸ್ಥಳೀಯ ಅಧ್ಯಯನಗಳ ಸಹಾಯದಿಂದ ಮಾತ್ರ ಸ್ತ್ರೀತ್ವ-ಅಸಮಾನತೆಯಂತಹ ಪರಿಕಲ್ಪನೆಗಳನ್ನು ಪುನರ್-ವಿವೇಚಿಸುವುದು ಸಾಧ್ಯ.

---

## ಚಕ್ರ

ಬೇವಿನ ಮರದ ಪ್ರತಿ ಎಲೆಯಲ್ಲೂ ಹಸಿರಿದೆ
ಮಾವಿನ ಮರದ ಎಲೆಯಂತೆಯೇ.
ಬೇವಿನ ಕೊಂಬೆ ಕೊಂಬೆಯಲ್ಲಿಯೂ ಉಸಿರಿದೆ.
ಮಾವಿನ ದಳದಳದಂತೆಯೇ.
ಎರಡೂ ಮರದ ಹೂಗಳ ಬಣ್ಣ ಬಿಳಿ.
ಅಲ್ಲಲ್ಲಿ ನೇಯ್ದಂತೆ ಮಂಜಿನ ಹಳಿ.

ಕಾಗೆಯೂ ಕಪ್ಪು ಕೋಗಿಲೆಯೂ ಕಪ್ಪು.
ಎರಡಕ್ಕೂ ಇದೆ ಜೀವಿಸುವ ಹಕ್ಕು.
ಇದರ ವೇಷ ಅದಕ್ಕೆ
ಅದರ ಮರಿಗೆ ಇದರ ತೆಕ್ಕೆ
ಹಾರಿದೊಡನೆ ಒಂದು ರೆಕ್ಕೆ
ಕುಕ್ಕುವುದು ಕೋಗಿಲೆ ಮರಿಗೆ ಕಾಗೆ
ತನ್ನದಲ್ಲವೆಂಬ ಕೋಪಕ್ಕೆ
ಸೃಷ್ಟಿಯ ಗಾಣವಾಡಿಸುವ ಹೇ ಪ್ರಕೃತಿಮಾತೆ.
ಬೇವು ಮಾವುಗಳ ಕಾಗೆ ಕೋಗಿಲೆಗಳ.

ಸಹವಾಸ, ಸಹಯೋಗ, ಸಹಕೂಟ
ಆಗಲೆಂದೇ ನೀನು ಮಾಡಿರುವ ಈ ಪವಾಡ
ಮನುಷ್ಯರೆದೆಯಲ್ಲಿ ಮಾತ್ರ ವಿಷವಾಗಿ
ಅಣು ಅಣುವೂ ಕೊಲ್ಲುತ್ತ ಬೆಂಕಿಯಾಗುತ್ತ.
ಉರಿಯಾಗುತ್ತ ಪೋಲೀಸರ ಗೋಲಿಯಾಗುತ್ತ
ಲಾಠಿಯಾಗುತ್ತ ಕೊನೆಗೆ ಬೂದಿಯಾಗುತ್ತ
ಪರಿಹಾರ ಧನವಾಗುತ್ತ ಮೊಸಳೆ ಕಣ್ಣೀರಾಗುತ್ತ.
ಶೂನ್ಯವಾಗುತ್ತ ಅಂತ್ಯವಿಲ್ಲದ ಅಂಧಕಾರದ
ಕಡೆಗೆ ನಡೆದಿರುವಾಗ, ಮತ್ತೆ

ಮಾವು ಚಿಗುರುತ್ತದೆ.
ಬೇವು ಎಲೆಯಾಗುತ್ತದೆ.
ಕೋಗಿಲೆ ಹಾಡುತ್ತದೆ.
ಕಾಗೆ ಮತ್ತೆ ಕೋಗಿಲೆಯ ಮೊಟ್ಟೆಗೆ ಕಾವು ಕೊಡುತ್ತದೆ.
ಚಕ್ರ ತಿರುಗುತ್ತದೆ.

**ಡಾ|| ಎಸ್. ವಿ. ಪ್ರಭಾವತಿ**

ಬರಬೇಕು ಹೀಗೆ... —ಭಾಗೀರಥಿ ಹೆಗಡೆ

ಒಮ್ಮೆ ಮಳೆ ಸುರಿಯಲೇಕು-
ಗಲ್ಲಿ ಗಲ್ಲಿಗಳಲ್ಲಿ
ಚೆಲ್ಲಾ ಪಿಲ್ಲಿ
ಬಿದ್ದ ಶತಮಾನಗಳ ಬೂದಿ-
ಕೊಳೆನಾತ ಹೊಡೆವ ಕಳೆದ ಕ್ಷಣಗಳ ಸಿಪ್ಪೆ-
ಅಸಂಖ್ಯಾತರ ಅರಿವೆ ಚಿಂದಿ-
ಸತ್ತ ಸುದ್ದಿಯ ಸಾರಿ
ಶವವಾದ ಕಾಗದ-
ಏನೆಲ್ಲವನ್ನೂ ಗುಡಿಸಿ ಹೊತ್ತೊಯ್ಯುವಂತೆ,
ಉದ್ದೋಉದ್ದ ಕಟ್ಟಿ ಗಬ್ಬೆದ್ದ ಚರಂಡಿ
ಕಿತ್ತೆದ್ದು ಜಳ ಜಳ ತೊಳೆದು ಹೋಗುವಂತೆ,
ಒಮ್ಮೆ ಮಳೆ ಧಾರೆಯಿಡಬೇಕು-
ಮುಗಿಲಿಂದ ಮಣ್ಣಿಗೇಕ ವಾಣಿ-
ಅಸಹನೆಯ ಬಿರು ಬಿಸಿಲಲ್ಲಿ ಒಣಗಿ
ಸಹಜ ಸೌಜನ್ಯದ ತೇವ ಇಂಗಿ
ಒಂದೇ ಒಂದು ಮಣ್ಣು ಕೋಟ್ಯಂತರ
ಬಿರುಕು ಬಿಟ್ಟು
ಮೀಸೆ ಮುಳುಗುವಲ್ಲೇ ಮನೆ ಮಾಡಿನಿಂತ
ಇಲಿ-ಹೆಗ್ಗಣ-ಹಾವು-ಚೇಳು
ಅಲ್ಲಲ್ಲೇ ನೀರು ಕುಡಿದು ಇಲ್ಲವಾಗುವಂತೆ.
ಕರುಣೆಯ ಪಸೆಯಿಲ್ಲದೆ ಹುಡಿ ಹಾರುವ
ನೆಲದ ನಾಲಗೆಯ ದಾಹ ತಣಿದು
ಭೂಮಿ ಮೈ ಬಿರುಕು ಬೆಸೆದು
ಭವಿಷ್ಯತ್ತಿನ ಬೀಜಕ್ಕೆ ಒಡಲು ತೆರೆಯುವಂತೆ.
ಇನ್ನೊಮ್ಮೆ ಮಳೆ ಗುಡುಗಬೇಕು-
ಸಿಡಿಯಬೇಕು,
ಭೂವ್ಯೋಮವೊಂದಾಗಿ ಅರ್ಭಟಿಸಿ
ಕೊಳೆತ ದಿನಗಳ ತರಗೆಲೆ ನೆಲಕೊತ್ತಬೇಕು,
ಮುದಿ ಮರದ ಬೇರು ಕಿತ್ತೆಸೆಯಬೇಕು,
ಎರ್‍ರಾ ಬಿರ್‍ರಿ ಬೆಳೆದ
ಹಳೆ ರಂಬೆಗಳ ಗೋಣು
ಲಟಲಟಲ್ಲನೆ ಮುರಿದು ಚೆಲ್ಲಬೇಕು,
ಯುಗಾಂತರದಿಂದ ಹಳಸಿ
ಲೋಳೆಗಟ್ಟಿದ ಮೇಲ್ಮಣ್ಣು
ಕೊಚ್ಚಿ ಹೊತ್ತೊಯ್ಯಬೇಕು,
ಹೊಸ ಮೊಳಕೆಗೆ ನೆಲವ ಹಸಗೊಳಿಸಬೇಕು.

# 'ಮಾನಸ' ಪತ್ರಿಕೆ'ಯ ಸುತ್ತ....

ವ್ಯಕ್ತಿ ಹಾಗೂ ಯಾವುದೇ ಸಂಸ್ಥೆಯ ಕೃಪಾಪೋಷಣೆಯಿಲ್ಲದೆ, ಹಾಗೂ ಇಂದಿನ ಸಾಮಾಜಿಕ ಸಾಂಸ್ಕೃತಿಕ ಪರಿಸರದಲ್ಲಿ ಮಹಿಳಾ ಪತ್ರಿಕೆಯ ಪ್ರಕಟನೆಯ ಸಂಪೂರ್ಣ ಜವಾಬ್ದಾರಿಯನ್ನು ಮಹಿಳೆಯರೇ ವಹಿಸಿಕೊಳ್ಳುವುದು ಅತ್ಯಗತ್ಯವಾದುದೆಂಬ ನಂಬಿಕೆಯ ಫಲವೇ 'ಮಾನಸ'. ಪತ್ರಿಕೆಯನ್ನು ಪ್ರಾರಂಭಿಸಿದಾಗ ಅಪಾರ ಬೆಂಬಲ, ಧೈರ್ಯವನ್ನು ತುಂಬಿದವರು ಇಳಾ ವಿಜಯ.

ಪತ್ರಿಕೆಗೆ ಅರ್ಥಪೂರ್ಣವಾದ ಹೆಸರನ್ನು ಆಯ್ಕೆ ಮಾಡುವ ಉದ್ದೇಶದಿಂದ ಮೂರು ನಾಲ್ಕು ದಿನ ಗ್ರಂಥಾಲಯದಲ್ಲಿ ಕುಳಿತು ಕಣ್ಣಲ್ಲಿ ಕಣ್ಣಿಟ್ಟು ಹುಡುಕಿದರೂ, ತೃಪ್ತಿಕರವಾದ ಯಾವ ಹೆಸರೂ ದೊರೆಯಲಿಲ್ಲ. ಇದೇ ಗುಂಗಿನಲ್ಲಿದ್ದಾಗ, ಪ್ರಸ್ತುತದಲ್ಲಿ ಬಳಕೆಯಲ್ಲಿರುವ 'ಮಾನವ' ಪದ ಕೇವಲ ಪುರುಷರನ್ನು ಒಳಗೊಳ್ಳುವುದರಿಂದ, 'ಮಾನವಿ' ಎಂಬ ಹೊಸ ಪದವನ್ನು ಏಕೆ ಪ್ರಯೋಗಿಸಬಾರದೆಂದು ಗೆಳತಿಯರೊಂದಿಗೆ ಚರ್ಚಿಸಿದೆವು. 'ಮಾನವಿ' ಪದ ಸೂಕ್ತವಾದುದೆಂದು ತೀರ್ಮಾನಿಸಿದೆವು.

ಪತ್ರಿಕೆಯ ಪ್ರಕಟನೆಯಲ್ಲಿ ಪ್ರಮುಖವಾಗಿ ಎದುರಾಗುವುದು ಹಣಕಾಸಿನ ಸಮಸ್ಯೆ. 'ಮಾನವಿ' ಐದು ಆರು ಸಂಚಿಕೆಗಳನ್ನು ಪ್ರಕಟಿಸಿದಾಗ ಒಳ್ಳೆಯ ಪ್ರೋತ್ಸಾಹವೇ ದೊರೆಯಿತು. ಪತ್ರಿಕೆಯ ಪ್ರತಿಯೊಂದು ಸಂಚಿಕೆಗೆ ಸುಮಾರು 1500 ರೂ ವೆಚ್ಚವಾಗುತ್ತಿತ್ತು. ಮೊದ ಮೊದಲು ಈ ಮೊತ್ತದ ಹಣವನ್ನು ಸಂಗ್ರಹಿಸಲು ಸಾಧ್ಯವಾದರೂ, ಕ್ರಮೇಣ ಇದು ತೀರಾ ದುಸ್ತರ ವೆನಿಸಿತು ದ್ವೈಮಾಸಿಕವೆಂದಿದ್ದರೂ, ಸಕಾಲದಲ್ಲಿ ಪತ್ರಿಕೆಯನ್ನು ಪ್ರಕಟಿಸಲು ಸಾಧ್ಯವಾಗಲಿಲ್ಲ. ವರ್ಷದಲ್ಲಿ ಕೆಲವು ಸಂಚಿಕೆಗಳನ್ನು ಪ್ರಕಟಿಸಲು ಸಾಧ್ಯವಾಗದೇ, ಕೆಲವು ಸಂಚಿಕೆಗಳನ್ನು ಒಟ್ಟಾಗಿ ಪ್ರಕಟಿಸಿದ್ದೂ ಉಂಟು.

'ಮಾನವಿ' ಹೆಸರು ಪತ್ರಿಕೆಗೆ ದೊರೆಯದ ಕಾರಣ ಸೂಚಿಸಿದ ಇನ್ನಿತರ ಹೆಸರುಗಳಲ್ಲಿ 'ಮಾನಸ ತಿಂಗಳ ಪತ್ರಿಕೆ' ಅನುಮತಿ ದೊರೆಯಿತು. ಪತ್ರಿಕೆಯ ಪ್ರಕಟಣೆಗೆ ಅನುಮತಿ ದೊರೆತಾಗ ತಲೆಯ ಮೇಲೆ ಒಂದು ದೊಡ್ಡ ಬಂಡೆಯೇ ಉರುಳಿ ಬಿದ್ದಂತಾಯಿತು. ಪತ್ರಿಕೆಯನ್ನು ಎರಡು ತಿಂಗಳಿಗೊಮ್ಮೆ ಸಕಾಲದಲ್ಲಿ ಪ್ರಕಟಿಸಲು ಸಾಧ್ಯವಾಗದೇ ಇರುವಾಗ, ಪ್ರತಿತಿಂಗಳೂ ಹೇಗೆ ಸಾಧ್ಯ ಎಂಬ ಆತಂಕದಿಂದ. ದುಗುಡದಿಂದ ದಿನಗಳನ್ನು ಕಳೆಯುತ್ತಾ, ಒಂದೆರೆಡು ಸಂಚಿಕೆಗಳನ್ನು ಪ್ರಕಟಿಸಿದ್ದೂ ಆಯಿತು.

ಪತ್ರಿಕೆಗೆ ಪ್ರತಿತಿಂಗಳೂ ಬೇಕಾದ ಹಣವನ್ನು ಸಂಗ್ರಹಿಸುವುದು ತೀರಾ ದುಸ್ತರವೆನಿಸಿದಾಗ, ಇದು ಇನ್ನೊಂದು ಹೊಸ ಆಲೋಚನೆಗೆ ಎಡೆಮಾಡಿಕೊಟ್ಟಿತು. ನಾವೇ ಯಾಕೆ ಒಂದು ಕಂಪೋಜಿಂಗ್ ಯೂನಿಟ್‌ನ್ನು ಪ್ರಾರಂಭಿಸಬಾರದು ? ಎರಡು ಪುಟಗಳಿಗಾಗುವ ಅಚ್ಚು ಮೊಳೆ, ಮತ್ತು ಇತರ ಚಿಕ್ಕ ಪುಟ್ಟ ಪರಿಕರಗಳನ್ನು ಹೊಂದಿಸಿಕೊಂಡು, ನಾವೇ ಅಚ್ಚು ಮೊಳೆ ಜೋಡಿಸಿ, ಬೇರೆ ಪ್ರಿಂಟಿಂಗ್ ಪ್ರೆಸ್‌ನಲ್ಲಿ ಪ್ರಿಂಟ್ ಮಾಡಿಸಿದರೆ ಅರ್ಧದಷ್ಟು ಖರ್ಚನ್ನು ಕಡಿತ ಗೊಳಿಸಬಹುದೆಂದು ಆಲೋಚಿಸಿ, ಇದಕ್ಕೆ ಬೇಕಾದ ಹಣವನ್ನು ಸಂಗ್ರಹಿಸಿದೆವು. ಕಂಪೋಜಿಂಗ್ ಬಲ್ಲ ಗೆಳತಿ ನಮ್ಮ ಜೊತೆಗಿದ್ದುದೇ ಈ ಯೋಜನೆಗೆ ಮೂಲ ಆಸರೆಯಾಗಿತ್ತು. ಪ್ರತಿ ತಿಂಗಳೂ, ಪೇಪರ್‌ಗೆ, ಹಾಗೂ ಪ್ರಿಂಟಿಂಗ್‌ಗೆ ಬೇಕಾದ ಹಣವನ್ನು ಹೊಂದಿಸಿ ಕೊಂಡರೆ ಪತ್ರಿಕೆಯನ್ನು ಸರಾಗವಾಗಿ ಪ್ರಕಟಿಸಬಹುದೆಂದು ಈ ಯೋಜನೆಯನ್ನು ಕಾರ್ಯಗತ ಗೊಳಿಸಿದೆವು. ಈ ಉದ್ದೇಶಕ್ಕಾಗಿ ವೈಯಕ್ತಿಕ ಜೀವನದಲ್ಲಿ ಹಲವಾರು ಬದಲಾವಣೆಯನ್ನು ಮಾಡಿಕೊಳ್ಳುವುದು ಅನಿವಾರ್ಯವಾಗಿತ್ತು.

ಎಲ್ಲಾ ಸ್ತ್ರೀಯರಿಗಿರುವಂತೆ, ನಮಗೂ, ಮನೆಯ ಜವಾಬ್ದಾರಿ, ಹೊರಗೆ ಕೆಲಸ ಮಾಡುವುದು, ಮಕ್ಕಳ ಜವಾಬ್ದಾರಿ, ಇದ್ದುದರಿಂದ ಮನೆಯ ಹತ್ತಿರವೇ ಪ್ರೆಸ್ ಇದ್ದರೆ ಒಳ್ಳೆಯದೆಂಬುದನ್ನುವುದರ ಜೊತೆಗೆ, ಕಂಪೋಜಿಂಗ್ ಬಲ್ಲ ಗೆಳತಿ ಕಾಡುಗೋಡಿಯಲ್ಲಿದ್ದುದರಿಂದ, ಹಾಗೂ, ಒಂದು ಚಿಕ್ಕ ಕೊಠಡಿಗೆ ಬಾಡಿಗೆ ಕೊಡುವುದು ಅಗ್ಗವೆನಿಸಿದ್ದರಿಂದ 'ಮಾನಸ'ವನ್ನು ಕಾಡುಗೋಡಿಯಿಂದ ಪ್ರಕಟಿಸ ತೊಡಗಿದೆವು.

ಈ ಹಂತದಲ್ಲಿ ನಾವೆಲ್ಲರೂ ಹಲವಾರು ಹೊಸ ಮೌಲ್ಯಗಳಿಗೆ ನಮ್ಮನ್ನು ನಾವು ತೆರೆದು ಗೂಳ್ಳುವ ಪ್ರಕ್ರಿಯೆಗೆ ಒಳಗಾಗಬೇಕಾಯಿತು. ಕಂಪೋಸ್ ಮಾಡಿದ ಮೇಲೆ, ಪೇಜು ಕಟ್ಟುವುದು. ಅಷ್ಟನ್ನೆತ್ತಿ ಗ್ಯಾಲಿಗಳಲ್ಲಿ ಸಾಕಷು

ದೂರವಿದ್ದ ಪ್ರೆಸ್‌ಗೆ ತೆಗೆದುಕೊಂಡು ಹೋಗುವುದು. ಪ್ರಿಂಟ್ ಆದ ನಂತರ ವಾಪಸ್ಸು ತರುವುದು, ಪುನಃ ಎರಡು ಪುಟಗಳನ್ನು ತೆಗೆದುಕೊಂಡು ಹೋಗುವುದು. ಒಂದೊಂದು ರೀಮ್ ಪೇಪರ್‌ಗೆ ಹಣ ಹೊಂದಿಸಿ ಬೆಂಗಳೂರಿನಿಂದ ಪೇಪರ್ ಹೊತ್ತು ತರುವುದು, ಹೀಗೆ ಪ್ರಿಂಟಿಂಗ್ ಮುಗಿದ ನಂತರ ನಾವೇ ಬೈಂಡಿಂಗ್ ಮಾಡು ವುದು, ವಿಳಾಸ ಬರೆದು, ಅಂಚೆ ಕಛೇರಿಗೆ ತೆಗೆದು ಕೊಂಡು ಹೋಗುವುದು. ಈ ಕೆಲಸಗಳನ್ನೆಲ್ಲಾ ನಾವೇ ಮಾಡ ಬೇಕಾಗಿತ್ತು.

ಈ ಕೆಲಸಗಳನ್ನೆಲ್ಲಾ ಹಂಚಿಕೊಂಡು ಸಮನಾಗಿ ಮಾಡಲೇ ಬೇಕಾಗಿತ್ತು. ಪತ್ರಿಕೆಗೆ ಸಂಬಂಧಪಟ್ಟ ನಿರ್ಧಾರ ಗಳನ್ನು ಎಲ್ಲರೂ ಒಟ್ಟಾಗಿ ತೆಗೆದುಕೊಳ್ಳುವುದು ನಮ್ಮ ನಂಬಿಕೆಯಾಗಿದೆ. ಹೀಗೆ ಕಲೆಕ್ಟಿವ್ ಆಗಿ ಕೆಲಸ ಮಾಡಬೇಕಾ ದರೆ, ಕೆಲಸದ ಹಿಂದಿರುವ ಮೇಲರಿಮೆ, ಕೀಳರಿಮೆಯ ಧೋರಣೆಯನ್ನು ತೊಡೆದು ಹಾಕಬೇಕು. ಮುಂತಾದ ಕೆಲಸಗಳು, ಪತ್ರಿಕೆಯ ಕಂಪೋಜಿಂಗ್, ಬೈಂಡಿಗ್, ಮುಂತಾದ ಎಲ್ಲಾ ಕೆಲಸಗಳು, ಪತ್ರಿಕೆಯನ್ನು ಸಂಪಾದಿಸು ವುದು, ಸಂಪಾದಕೀಯ ಬರೆಯುವುದು, ಲೇಖನ ಬರೆಯು ವಷ್ಟೇ ಮಹತ್ವವಾದವು. ಮಹಿಳೆಯರೆಲ್ಲರೂ ಒಟ್ಟಾಗಿ ಕೆಲಸಗಳನ್ನು ಸಮನಾಗಿ ಹಂಚಿಕೊಂಡು ಮಾಡುವುದು, ನಿರ್ಧಾರಗಳನ್ನು ಎಲ್ಲರೂ ಒಟ್ಟಾಗಿ ತೆಗದು ಕೊಳ್ಳುವುದು, ಇದನ್ನು ಒಂದು ಮೌಲ್ಯವಾಗಿ ನಾವೂ ಒಪ್ಪಿಕೊಂಡು, ಇತರರಲ್ಲೂ ಈ ಮೌಲ್ಯವನ್ನು ಬೆಳೆಸಲು ಪ್ರಯತ್ನಿ ಸಿದೆವು.

ಕಲೆಕ್ಟಿವ್‌ಆಗಿ ಜವಾಬ್ದಾರಿಯಿಂದ ಪತ್ರಿಕೆಯ ಪ್ರಕಟಿಸುವುದೆಂದು ನಾವೆಲ್ಲರೂ ಒಪ್ಪಿಕೊಂಡು ಕಾರ್ಯ ನಿರ್ವಹಿಸುತ್ತಿದ್ದರೂ, ಹಲವಾರು, ವೈರುಧ್ಯಗಳು, ದ್ವಂದ್ವಗಳಿಂದ ನಾವು ಮುಕ್ತವಾಗಿರಲಿಲ್ಲ. ಒಟ್ಟಾಗಿ, ಸಮನಾಗಿ ಜವಾಬ್ದಾರಿಯನ್ನು ಹಂಚಿಕೆಕೊಂಡು ಕೆಲಸ ಮಾಡುವುದು ತತ್ವಶಃ ಕಾರ್ಯಗತ ವಾಗುವುದರಲ್ಲಿ ಹಲ ವಾರು ಮಿತಿಗಳು ಎದುರಾದವು.

ಕಾಡುಗೋಡಿ, ಬೆಂಗಳೂರಿನಿಂದ ದೂರವಿರುವ ಪ್ರಶ್ನೆಯ ಜೊತೆಗೆ ನಮ್ಮಲ್ಲಿನ ಮಿತಿಗಳು, ಸಾಂದರ್ಭಿಕ ವಾಗಿ ಮೂಡಿ ಬಂದ ಕೆಲಸಗಳು ಕೆಲವರ ಹೆಗಲ ಮೇಲೆ ಬೀಳುತ್ತಿದ್ದುದು, ಕೆಲವರು ಅವರವರಿಗೆ ಸಾಧನ ವಾಗುವ ಕೆಲಸಗಳನ್ನು ಮಾಡುವುದು, ಕೆಲವೊಮ್ಮೆ ಒಬ್ಬಿಬ್ಬರು, ವೈಯಕ್ತಿಕ ತೊಂದರೆಯಿಂದ ಇದ್ದಕ್ಕಿದ್ದ ಹಾಗೆ ಕೆಲವು ತಿಂಗಳುಗಳ ಕಾಲ 'ಮೌನವಾಗಿ' ಬಿಡುವುದು ಇವು ನಮ್ಮಲ್ಲಿ ಮಾನಸಿಕ ಕ್ಷೋಬೆಯನ್ನು ಉಂಟು ಮಾಡುವುದರ ಜೊತೆಗೆ ತಾತ್ಕಾಲಿಕ ನಮ್ಮ ನಮ್ಮಲ್ಲೆ ಸಿಟ್ಟು, ಅಸಹನೆಯನ್ನು ಹುಟ್ಟು ಹಾಕಿದ ಪ್ರಸಂಗಗಳು ಸಾಕಷ್ಟಿದೆ.

ಇಷ್ಟೆಲ್ಲದರ ನಡುವೆಯು ಸುಮಾರು ಏಳುವರ್ಷಗಳಿಂದ 'ಮಾನಸ' ಪ್ರಕಟಿಸುತ್ತಿದ್ದೇವೆ. ಕ್ರಮೇಣ ಕಾಡುಗೋಡಿ ಗ್ರಾಮದ ಇತರ ಮಹಿಳೆಯರು ಕಂಪೋಜಿಂಗ್ ಕಲಿತು ಪ್ರೆಸ್ ಕೆಲಸ ಮಾಡುತ್ತಾ ಬಂದಿದ್ದರೂ, ಪತ್ರಿಕೆಯನ್ನು ಸಕಾಲದಲ್ಲಿ ಪ್ರಕಟಿಸಲು ಅದರ ಗುಣಮಟ್ಟವನ್ನು ಉತ್ತಮ ಪಡಿಸಲು ಸಾಧ್ಯವಾಗಲಿಲ್ಲ. ಕಂಪೋಜಿಂಗ್ ಮಾಡುವ ಗೆಳತಿಯರು ಅಲ್ಪಸ್ವಲ್ಪ ವೇತನವನ್ನು ತೆಗೆದುಕೊಳ್ಳ ಲಾಗದ ಪರಿಸ್ಥಿತಿಯಲ್ಲಿ, ಅವರೂ ಬೇರೆ ಕೆಲಸಗಳಿಗೆ ಪ್ರಯತ್ನಿಸುವುದು ಅಗತ್ಯವಾಗಿತ್ತು. ನಾವು ಅವರಿಗೆ ಬೆಂಬಲ ನೀಡಿದರೂ,ಈ ಬದಲಾವಣೆಗಳಿಂದ 'ಮಾನಸ'ದ ಕೆಲಸ ತೀರಾ ಕಷ್ಟಸಾಧ್ಯವೆನಿಸಿತು. ನಮ್ಮ ಶಕ್ತಿಯನ್ನು ಮೀರಿ ಶ್ರಮ ಹಾಕಿದರೂ, ಪತ್ರಿಕೆಯ ಕೆಲಸ ಸುಲಲಿತ ವಾಗಲಿಲ್ಲ.

ನಾವು ಮಹತ್ವಾಕಾಂಕ್ಷೆಯಿಂದ ಕಂಪೋಜಿಂಗ್ ಯೂನಿಟ್ಟನ್ನು ಪ್ರಾರಂಭಿಸಿದ್ದೆವು. ಕ್ರಮೇಣ ಒಂದು ಚಿಕ್ಕ ಪ್ರೆಸ್ ಪ್ರಾರಂಭಿಸುವುದು, ಪತ್ರಿಕೆಯ ಜೊತೆಗೆ ಇತರ ಕೆಲಸಗಳಿಂದ ಪ್ರೆಸ್ ನಡೆಸುವ ಉದ್ದೇಶವನ್ನಿಟ್ಟು ಕೊಂಡಿದ್ದರೂ, ಈ ಕನಸು ಕೈಗೂಡುವುದರಲ್ಲಿ ನಾನಾ ರೀತಿಯ ತೊಡಕುಗಳಿದ್ದವು. ಒಮ್ಮೊಮ್ಮೆ ಪ್ರೆಸ್ ಕೆಲಸ ಗಳು ದುತ್ತೆಂದು ತಲೆಯ ಮೇಲೆ ಬಿದ್ದಾಗ, ಎಳೆಯ ಮಕ್ಕಳನ್ನು ನಿರ್ಲಕ್ಷಿಸಿ ಮಾಡಬೇಕಾದ ಸಂದರ್ಭದಲ್ಲಿ,ಸದ್ಯ ಪತ್ರಿಕೆಯನ್ನು ನಿಲ್ಲಿಸಿಬಿಟ್ಟರೆ ಸಾಕು ಎಂಬ ಅನಿಸಿಕೆ ಎಷ್ಟೋ ಬಾರಿ ಕಾಡಿದ್ದುಂಟು.

ಈ ದುಗುಡ ಪುನಃ ನಮ್ಮ ಹಿಂದಿನ ನಿರ್ಧಾರವನ್ನು ಬದಲಿಸಿತು ಪತ್ರಿಕೆಗಾಗಿ ಖರ್ಚು ಮಾಡುತ್ತಿರುವ ಇದೇ ಮೊತ್ತದಲ್ಲಿ ಇಳಾ ಪ್ರೆಸ್‌ನಲ್ಲಿ ಮಾಡಿಕೊಡುವುದಾದರೆ ಈಗ ತಲೆಯ ಮೇಲಿರುವ ಹೊರೆಯನ್ನು ಸಂಪೂರ್ಣ ವಾಗಿ ಕಡಿಮೆ ಮಾಡಿಕೊಳ್ಳಬಹುದೆಂದು, ಚರ್ಚಿಸಿ, ಪುನಃ ಹಿಂದಿನ ತೀರ್ಮಾನಕ್ಕೆ ಬಂದೆವು.ಕಂಪೋಜಿಂಗ್ ಯೂನಿಟ್ ಪ್ರೆಸ್ ಮಾಡುವ ಕನಸೂ, ಎಲ್ಲಾ ವೈಫಲ್ಯದ ಸಂಕೇತ ವಾಗಿ ನಮ್ಮ ಮುಂದಿವೆ.

ಈ ನಿರ್ಧಾರದಲ್ಲೂ ಪ್ರಮುಖವಾಗಿ ಎದುರಾದದು, ಹಣಕಾಸಿನ ಸಮಸ್ಯೆ ನಾವೇ ಕಂಪೋಜಿಂಗ್ ಮಾಡುವಾಗ ಬೇರೆ ಬೇರೆ ಸಂದರ್ಭದಲ್ಲಿ ಹೊಂದಿಸಿಕೊಳ್ಳುತ್ತಿದ್ದುದು ಒಂದು ರೀತಿಯಲ್ಲಿ ಸರಳವಾಗಿತ್ತು ಆದರೆ, ಈಗ ಒಮ್ಮೆಲೇ ಒಟ್ಟು ಹಣವನ್ನು ಹೊಂದಿಸಬೇಕಾದುದರಿಂದ ಪುನಃ ಕಲೆಕ್ಟಿವ್ ಜವಾಬ್ದಾರಿಯ ಬಗ್ಗೆ ಪುನರ್ವಿಮರ್ಶಿಸ ತೊಡಗಿದೆವು.

ಈ ಹಂತದಲ್ಲಿ ಪತ್ರಿಕೆಯ ಹಿತ ದೃಷ್ಟಿಯಿಂದ ಎರಡು ಪ್ರಮುಖ ನಿರ್ಣಯಗಳನ್ನು ತೆಗೆದುಕೊಳ್ಳಬೇಕಾಯಿತು, ಪತ್ರಿಕೆಯ ಕೆಲಸದಲ್ಲಿ ಹೆಚ್ಚು ಹೆಚ್ಚು ಮಹಿಳೆಯರನ್ನು ತೊಡಗಿಸಿಕೊಳ್ಳಬೇಕೆಂದು ಒಪ್ಪಿಕೊಳ್ಳಲಾಯಿತಾದರೂ, ಆಸಕ್ತ ಮಹಿಳೆಯರು ಬೆರಳೆಣಿಕೆಯಷ್ಟಿದ್ದರೂ, ತಮ್ಮ ಧೋರಣೆಗಳಿಂದಾಗಿ, ಅಥವಾ ಮಿತಿಗಳಿಂದಾಗಿ ಪತ್ರಿಕೆಯ ಇತರ ಕೆಲಸ ಜವಾಬ್ದಾರಿಗಳನ್ನು ವಹಿಸಿ ಕೊಳ್ಳಲು ಹಿಂದೇಟು ಹಾಕುತ್ತಾರೆ. ಪತ್ರಿಕೆಯ ಕೆಲಸಗಳನ್ನು ಹಂಚಿಕೊಳ್ಳಬಯಸುವ ಮಹಿಳೆಯರಲ್ಲಿ ಹಲವಾರು ಮಿತಿಗಳು ಕಂಡು ಬರುತ್ತವೆ. ಸಂಪಾದಕೀಯ ಮಂಡಳಿಯ ಸದಸ್ಯರು ಇದಕ್ಕೆ ಹೊರತಾಗಿರುವರೆಂದು ನಾವು ಭಾವಿಸಿಲ್ಲ.

ಪತ್ರಿಕೆಯ ಸಂಪೂರ್ಣ ಜವಾಬ್ದಾರಿಯನ್ನು ಯಾರು ಸಮನಾಗಿ ಹಂಚಿಕೊಳ್ಳಬಯಸುತ್ತಾರೋ ಅಂತವರು ಮಾತ್ರ ಸಂಪಾದಕೀಯ ಮಂಡಳಿಯಲ್ಲಿರುವುದೆಂದು ತೀರ್ಮಾನಿಸಿದರ ಫಲವಾಗಿ ಪತ್ರಿಕೆಯ ಕೆಲಸವನ್ನು ಪಟ್ಟಿ ಮಾಡಿ, ಹಣವನ್ನು ಸಂಗ್ರಹಿಸುವುದು, ಪತ್ರಿಕೆಯನ್ನು ಸಂಪಾದಿಸುವುದು, ಪ್ರಿಂಟಿಂಗ್ ಜವಾಬ್ದಾರಿ, ವಿಳಾಸ ಬರೆಯುವುದು. ಅಂಚೆಗೆ ರವಾನಿಸುವುದು ಹಂಚಿಕೊಂಡು ಕಾರ್ಯ ನಿರ್ವಹಿಸುತ್ತಿದ್ದೇವೆ. ಪತ್ರಿಕೆಗೆ ಬೇಕಾದ ಸುಮಾರು 1500ರೂ.ವನ್ನು ಕಲೆಕ್ಟಿವ್ ಆಗಿ ಹಂಚಿಕೊಂಡು ನಾಲ್ಕು ಮಹಿಳೆಯರು 380ರಂತೆ ಸಂಗ್ರಹಿಸುತ್ತಿದ್ದೇವೆ ಆಯ್ದು ಜಾಹೀರಾತು, ಚಂದಾ, ಅಜೀವ ಸದಸ್ಯತ್ವ ಕೆಲವರಿಂದ ಪ್ರತಿ ತಿಂಗಳೂ 10 ರೂ.ಗಳಂತೆ, ಹೀಗೆ ಸಂಗ್ರಹಿಸಿ ಕೊಡಬೇಕು. ಪ್ರತಿತಿಂಗಳೂ ಸಮಯಕ್ಕೆ ಸರಿಯಾಗಿ ಸಂಗ್ರಹಿಸಲು ಸಾಧ್ಯವಾಗದಿದ್ದರೆ, ಅದನ್ನು ಅವರು ವೈಯಕ್ತಿಕವಾಗಿ ನೀಡಿ ನಂತರ ಸಂಗ್ರಹಿಸಿಕೊಳ್ಳಬಹುದು. ಈ ತೀರ್ಮಾನದಿಂದಾಗಿ, ಪತ್ರಿಕೆಯನ್ನು ಪ್ರತಿ ತಿಂಗಳೂ ಕ್ರಮವಾಗಿ ಪ್ರಕಟಿಸಲು ಸಾಧ್ಯವಾಗುತ್ತಿದೆ.

ಇದೇ ಸಮಯದಲ್ಲಿ ಪತ್ರಿಕೆಯ ಕಛೇರಿಯ ವಿಳಾಸದಲ್ಲಿ ಬದಲಾವಣೆಯನ್ನು ಮಾಡಿರುವುದನ್ನು ಓದುಗರ ಗಮನಕ್ಕೆ ತರಬಯಸುತ್ತೇವೆ. ಮಹಿಳೆಯರು ಆಸಕ್ತಿ ತೋರಿದರೂ, ಕಾಡುಗೋಡಿ ತುಂಬಾ ದೂರವಾದುದರಿಂದ ಬೇಟಿಯಾಗಲು ಸಾಧ್ಯವಾಗುತ್ತಿರಲಿಲ್ಲ. ನಮ್ಮ ಈ ಕೆಲಸಕ್ಕೆ ಸದಾ ಪ್ರೋತ್ಸಾಹ ಹಾಗೂ ಮೌನವಾಗಿಯೇ ಬೆಂಬಲ ನೀಡುತ್ತಿದ್ದ, ಶ್ರೀ ಎ. ಜಿ. ದುರ್ಗಪ್ಪ ಅವರು, ಅವರ ಮನೆಯ ಶೆಡ್‌ನ್ನು ಮಾನಸಕ್ಕೆ ಉಚಿತವಾಗಿ ನೀಡಿದ್ದಾರೆ. ಇದು ಅವರ ಪ್ರಗತಿಪರ ಚಿಂತನೆಯ ಹೃದಯ ವೈಶಾಲ್ಯತೆಯನ್ನು ತೋರಿಸುತ್ತದೆ. ಮಾನಸ ಅವರಿಗೆ ತುಂಬು ಹೃದಯದ ಕೃತಜ್ಞತೆಯನ್ನು ಸಲ್ಲಿಸುತ್ತದೆ.

ವರ್ಷಗಳಲ್ಲಿ ಪತ್ರಿಕೆಯನ್ನು ಬಳಸಿ ಕೊಳ್ಳಲು ಹಲವಾರು ಸಿಹಿ-ಕಹಿ ಪ್ರಯೋಗಗಳನ್ನು ಮಾಡಿದ್ದೇವೆ. ಆಯಾ ಸಂದರ್ಭದಲ್ಲಿ ತೆಗೆದು ಕೊಂಡ ನಿಲುವುಗಳು ಆಯಾ ಸಮಯದಲ್ಲಿ ಅನಿವಾರ್ಯವಾದವುಗಳು. ಕಾಲ, ಸಂದರ್ಭ ಬದಲಾದ ಹಾಗೆ, ಮೂಲಭೂತವಾದ ನಂಬಿಕೆ ಉದ್ದೇಶದ ಸಾಧನೆಗಾಗಿ ನಿಲುವು, ನಿರ್ಧಾರಗಳನ್ನು ಬದಲಾಯಿಸಿಕೊಂಡು ಬಂದಿದ್ದೇವೆ. ಇದು ಆರೋಗ್ಯಪೂರ್ಣವಾದ ಚಲನಶೀಲತೆಯ ಸಂಕೇತವೆಂದು ನಾವು ನಂಬಿದ್ದೇವೆ. ಈ ಚಲನ ಶೀಲತೆಗೆ ನೀರೆರೆಯುವರು ಸಹೃದಯ ಓದುಗರು. ಓದುಗರ, ಬೆಂಬಲ, ಸಹಕಾರದಿಂದ ಮಾತ್ರ ಪತ್ರಿಕೆ ಉಳಿಯಲು ಬೆಳೆಯಲು ಸಾಧ್ಯವಾಗುತ್ತದೆ.

**ಸಂಪಾದಕೀಯ ಮಂಡಳಿ**

# ಡಾ. ಆನಂದಿಬಾಯಿ ಪ್ರಸಾದ್-ಒಂದು ಸ್ಮರಣೆ

**ಹೆಚ್. ಎಸ್. ಸುಜಾತ**

ಆನಂದಿಬಾಯಿ ಪ್ರಸಾದ್ ಅವರಿಗೆ ರಾಷ್ಟ್ರಪ್ರಶಸ್ತಿ ದೊರಕಿದ ಸಂದರ್ಭವದು. ಒಮ್ಮೆ ಅವರನ್ನು ನೋಡ ಬೇಕೆನಿಸಿತು. ತಂದೆಯವರೊಡನೆ ಪ್ರಸಾದ್ ಮೆಮೋರಿ ಯಲ್ ನರ್ಸಿಂಗ್ ಹೋಂಗೆ ಹೋದೆ. ಆಗ ಅವರಿನ್ನೂ ಬಂದಿರಲಿಲ್ಲ. ಹೌದು ಕುಳಿತೆವು. ಅಂತೂ ಬಂದರು. ವ್ಯಕ್ತಿ ಯಾರೆಂದು ನೋಡಿದೆ. ಸ್ಲೀವ್‌ಲೆಸ್ ರವಿಕೆ, ಸಾದಾ ಸೀರೆಯಲ್ಲಿದ್ದ ಅವರನ್ನು ನೋಡಿದಾಗ ಗೌರವ ಮೂಡಿತು. ಕಾರಣ, ಚಿಕ್ಕಂದಿನಿಂದಲೂ ಅನಾಥ ಮಕ್ಕಳ ಬಗ್ಗೆ ವಿಶೇಷ ಒಲವಿದ್ದ ನನಗೆ, ಅಂತಹ ಮಕ್ಕಳಿಗಾಗಿ 'ಬಾಪೂಜಿ ಚಿಲ್ಡ್ರನ್ಸ್ ಹೋಂ'ನ್ನು 1977ರಲ್ಲಿ ಸ್ಥಾಪಿಸಿದ ಅವರು ಮಹಾಮಾತೆಯಂತೆ ಕಂಡರು. ಇವರ ಈ ಸಾಮಾಜಿಕ ಸೇವೆಗಾಗಿಯೇ ಪ್ರಶಸ್ತಿಯೂ ಲಭಿಸಿತ್ತು. ನನ್ನ ತಂದೆಗೆ ಅವರ ಪರಿಚಯ ವಿತ್ತು. ಬಹಳ ದೀರ್ಘಕಾಲ ಭೇಟಿಯಾಗಿರಲಿಲ್ಲ. ಈ ಸಂದರ್ಭದಲ್ಲಿ ಗುರುತಿಸುತ್ತಾರೋ ಇಲ್ಲವೋ ಎಂದೆನಿಸಿತು ಆದರೆ ಕಂಡದ್ದೇ ತಡ, 'ಮೇಷ್ಟ್ರೆ, ಬನ್ನಿ' ಎಂದು ತಮ್ಮ ಛೇಂಬರ್‌ಗೆ ಕರೆದರು. ಸುಮಾರು ಮುಕ್ಕಾಲು ಗಂಟೆ ಕುಳಿತೆವು. ಈ ಇಳಿವಯಸ್ಸಿನಲ್ಲೂ ಕರ್ತವ್ಯದ ಕಡೆಗೆ ಓಗೊಟ್ಟು ಅಂದಿನ ಪತ್ರ ವ್ಯವಹಾರಗಳನ್ನು ವೀಕ್ಷಿಸಿದರು. ನಡು ನಡುವೆ ನನ್ನ ಕೆಲಸವೇ ಹೀಗೆ. ಒಂದು ಕ್ಷಣ ಬಿಡುವಾಗುವುದಿಲ್ಲ ಎಂದು ಹೇಳುತ್ತಲೇ ತಮ್ಮ ಕರ್ತವ್ಯ ಮುಗಿಸಿದರು. ನಂತರ ನಮ್ಮತ್ತ ಸಂಪೂರ್ಣ ಗಮನ ಹರಿಸಿ ಬಂದದ್ದೇಕೆ? ಎಂದು ವಿಚಾರಿಸಿದರು. ಮೊದಲಿಗೆ ಅಭಿನಂದಿಸಿದೆವು. ಆಗ "ರಾಷ್ಟ್ರಪ್ರಶಸ್ತಿ ಬಂದ ನಂತರ ವಿಪರೀತ ಪ್ರಚಾರ ಸಿಕ್ಕಿದಂತಾಗಿದೆ. ಜನ ಹುಡುಕಿ ಕೊಂಡು ಬರುತ್ತಿದ್ದಾರೆ. ಕರ್ತವ್ಯಕ್ಕೆ ಅಡ್ಡಿಯಾಗುತ್ತಿದೆ" ಎಂದರು ಅವರು.

ನಮ್ಮೊಡನೆ ನೊಂದ ಸ್ತ್ರೀಯೊಬ್ಬರು ಇದ್ದರು. ಆನಂದಿಬಾಯಿ ಬಗ್ಗೆ ಸಾಕಷ್ಟು ಕೇಳಿದ್ದರಿಂದ ಅವರಲ್ಲಿ ತಮ್ಮ ಅಳಲನ್ನು ತೋಡಿಕೊಂಡರು. ಆ ನೊಂದ ಮಹಿಳೆ ಅಲ್ಲದೆ ತಮ್ಮಿಂದಾಗುವ ಸಹಾಯ ಮಾರ್ಗದರ್ಶನ ಮಾಡ ಬೇಕೆಂದು ಕೇಳಿಕೊಂಡರು. ಕೂಡಲೇ ಆನಂದಿ ಅವರ ಪ್ರತಿಕ್ರಿಯೆ ಹೀಗಿತ್ತು." ಹೆಣ್ಣುಮಕ್ಕಳು ಕಣ್ಣೀರು ಹಾಕ್ತಾ ಕುಳಿತುಕೊಳ್ಳಬಾರದು. ಏನಾದ್ರೂ ಕೆಲಸ ಮಾಡ್ತಾ ಇರಬೇಕು," ಎಂದು, ಯಾವುದಕ್ಕೂ ಇಂತಹ ದಿನ ಬನ್ನಿ. ನಾನೇ ಮನೆಗೆ ಕರೆದುಕೊಂಡು ಹೋಗ್ತೇನೆ, ಚಿಲ್ಡ್ರನ್ಸ್ ಹೋಂ ನೋಡಬಹುದು ಎಂದು ಸಮಾಧಾನ ಹೇಳಿದರು.

ಆನಂದಿಯವರು ಹೇಳಿದ ದಿನಕ್ಕೆ ಸರಿಯಾಗಿ ಹೋದೆವು ಸ್ಪಾಂಡಿಲೈಟೀಪ್‌ನಿಂದಾಗಿ ಕುತ್ತಿಗೆಗೆ ಬೆಲ್ಟ್ ಹಾಕಿಕೊಂಡೇ ಕೆಲಸದಲ್ಲಿ ನಿರತರಾಗಿದ್ದ ಅವರನ್ನು ನೋಡಿದಾಗ ಎಷ್ಟೋ ಮಂದಿ ಅವರ ಸ್ಥಿತಿಯಲ್ಲಿ ಆ ವಯಸ್ಸಿನಲ್ಲಿ ಯಾವುದೇ ಜವಾಬ್ದಾರಿ ಹೊತ್ತುಕೊಳ್ಳಲು ಸಿದ್ಧರಿರುವುದಿಲ್ಲ; ಅಂತಹದರಲ್ಲಿ ಈ ನರ್ಸಿಂಗ್ ಹೋಂನ ಆಡಳಿತ ನಿರ್ವ ಹಿಸುತ್ತಿದ್ದಾರಲ್ಲಾ! ಎಂದೆನಿಸಿತು. ಮಧ್ಯಾಹ್ನ 12-30ಕ್ಕೆ ಮನೆಗೆ ಕಾರಿನಲ್ಲಿ ಕರೆದುಕೊಂಡು ಹೋದರು. ಏನಿತ್ತೋ ಅದನ್ನು ಸ್ವತಃ ನಮಗೆ ಕುಡಿಯಲು ತಿನ್ನಲು ಕೊಟ್ಟರು ತಾವಿಲ್ಲಿ ಒಬ್ಬಂಟಿಗರಾಗಿ ವಾಸಿಸುತ್ತಿರುವುದಾಗಿಯೂ, ಆಗಾಗ್ಗೆ ಮಕ್ಕಳು ಬಂದು ಸಹಾಯ ಮಾಡುವುದಾಗಿಯೂ ತಿಳಿಸಿದರು. ಹೀಗೆ ಮಾತನಾಡುತ್ತಾ, ತಾವು ಒಂದು ವಾರದ ಹಿಂದೆ ಅನುಭವಿಸಿದ ವೇದನೆಯನ್ನು ಅರುಹಿದರು. ಮಲಗಿದ್ದವರಿಗೆ ಏಳಲಿಕ್ಕಾಗದ ಪರಿಸ್ಥಿತಿಯುಂಟಾಗಿತ್ತು. ಕ್ಲಪ್ತ ಸಮಯಕ್ಕೆ ಬರುವ ಸಹಾಯಕಿಯೊಬ್ಬರು ಬಾಗಿಲು ತಟ್ಟಿದಂತೆ ಬಾಗಿಲು ತೆಗೆಯುವುದು ಹೇಗೆ? ಎಂಬುದೇ ಪ್ರಶ್ನೆಯಾಗಿತ್ತು. ಹೇಗೋ ಸಾವರಿಸಿಕೊಂಡು ಬಾಗಿಲು ತೆಗೆದೆ. ಒಳಗೆ ಬಂದ ಮಮತಾಳಿಗೆ ನಿಜಕ್ಕೂ ದುಃಖ ವಾಯಿತು. ಏನು ಮಾಡೋದು? ಎಂದು ತಮ್ಮ ಒಂಟಿ ತನದ ಬವಣೆಯನ್ನು ಹೇಳಿಕೊಂಡಿದ್ದರು. ನಂತರ ನಮ್ಮನ್ನು ಬಾಪೂಜಿ ಚಿಲ್ಡ್ರನ್ಸ್ ಹೋಂಗೆ ಕರೆದುಕೊಂಡು ಹೋದರು (ಗೋಕುಲಂನಲ್ಲಿದೆ) ಅವರನ್ನು ಕಂಡ ಕೂಡಲೇ ಮಕ್ಕಳು 'ಅಮ್ಮ ಬಂದ್ರು' ಎಂದು ಖುಷಿ ಪಟ್ಟರು. ಅನಾಥ ಮಕ್ಕಳಿಗೆಂದು ನಿರ್ಮಿಸಿದ ಮನೆಯನ್ನು ಖುದ್ದಾಗಿ ತೋರಿಸಿದರು. ಮಕ್ಕಳಿಂದ ಪ್ರಾರ್ಥನೆ ಮಾಡಿಸಿದರು. ಮಕ್ಕಳ ಶಿಸ್ತು ಮೆಚ್ಚುವಂತಹದ್ದು, ಮಮತೆಯ ತಾಯಿ ಯಾಗಿ ಆ ಮಕ್ಕಳ ಪ್ರೀತಿ ವಿಶ್ವಾಸ ಗಳಿಸಿದ್ದನ್ನು ಗುರುತಿಸಿದೆ. ಹಾಗಾಗಿ ಮಕ್ಕಳನ್ನು ದತ್ತು ತೆಗೆದು

ಕೊಳ್ಳಲು ಬಂದವರಿಗೆ ನಿರಾಸೆಯಾಗಿದೆ ನುಂತೆ. ಒಮ್ಮೆ ಒಪ್ಪಿಹೋದ ಮಕ್ಕಳು ಹಿಂದಿರುಗಿದ್ದಾರಂತೆ. ಅಮ್ಮನನ್ನು ಬಿಟ್ಟು ಎಲ್ಲೂ ಹೋಗೋಲ್ಲ ಎನ್ನುತ್ತಾರಂತೆ. ಮಕ್ಕಳಿಗೆ ಸಕಲ ಸೌಕರ್ಯಗಳನ್ನು ಕಲ್ಪಿಸಿಕೊಟ್ಟಿದ್ದಾರೆ. "ನಮ್ಮ ನಿರ್ಮಲ ಜಪಾನ್‌ಗೆ ಹೋಗಲು ಆಯ್ಕೆಯಾಗಿದ್ದಾಳೆ" ಎಂದು ಹೆಮ್ಮೆಯಿಂದ ಮಕ್ಕಳ ಬೆಳವಣಿಗೆಯ ಬಗ್ಗೆ ತಮ್ಮ ತೃಪ್ತಿಯನ್ನು ವ್ಯಕ್ತಪಡಿಸಿದರು. ಈ ಮಕ್ಕಳನ್ನು ಸಕಾಲಕ್ಕೆ ಸರ್ಕಾರ ಏನಾದ್ರೂ ಕೊಡ್ತದಾ? ಎಂದು ಕೇಳಿದೆ "ತಲಾ 100 ರೂಪಾಯಿ ಕೊಡ್ತಾರಪ್ಪೆ" ಎಂದಿದ್ದರು. ಅದು ಸಾಕಾಗುವುದಿಲ್ಲ. ನಾನಾಗಿ ಯಾರನ್ನು ಭಿಕ್ಷೆ ಬೇಡುವುದಿಲ್ಲ. ಸಂತೋಷವಿರುವವರು ಕೊಟ್ಟದ್ದನ್ನು ತೆಗೆದುಕೊಳ್ತೀನೆ" ಎಂದು ಮಕ್ಕಳನ್ನು ನಿಭಾಯಿಸುವ ಪರಿಯನ್ನು ತಿಳಿಸಿದ್ದರು. ನನ್ನ ಸ್ವಂತ ಮಕ್ಕಳನ್ನು ನೋಡಿಕೊಳ್ಳಲಿಕ್ಕೆ ಸೇವಾ ಮನೋಭಾವದ ವ್ಯಕ್ತಿಯನ್ನು ಅರಸುತ್ತಿರುವುದಾಗಿ, ಮಕ್ಕಳ ಭವಿಷ್ಯದ ಬಗ್ಗೆ ಹೊಂದಿದ್ದ ಕಳಕಳಿಯನ್ನು ಸೂಚಿಸಿದರು. ಇಲ್ಲಿ ಉದ್ಯೋಗಕ್ಕೆ ಅವಕಾಶವೇನೋ ಇದೆ. ಆದರೆ ತ್ಯಾಗ, ತಾಳ್ಮೆ ಮತ್ತು ದೃಢತೆಯ ಅಗತ್ಯವಿವೆ." ಎಂದು ವಾಸ್ತವಾಂಶವನ್ನು ಮನವರಿಕೆ ಮಾಡಿಸಿದರು, ಆ ನೊಂದ ಸ್ತ್ರೀಗೆ ತಾನು ಆಲೋಚಿಸುವುದಾಗಿ ಆಕೆ ಹೇಳಿದರಪ್ಪೆ.

ಅವರ ಮನೆಯಲ್ಲಿ ಕುಳಿತು ಮಾತನಾಡುವಾಗ ನಾವು ಕೇಳಿದ್ದಕ್ಕೆ ರಾಷ್ಟ್ರಪ್ರಶಸ್ತಿ ಪತ್ರ ತೋರಿಸಿ, ಸಮಾರಂಭದ ವಿವರಣೆ ನೀಡಿದರು. ಹಾಗೆಯೇ ಹೆಣ್ಣು ಮಕ್ಕಳಿಗೆ ಕಿವಿ ಮಾತನ್ನು ಹೇಳಿದರು. "ನೀವು ನೊಂದಿದ್ದೀರಿ ಎಂದಾಕ್ಷಣ ಎಲ್ಲವನ್ನೂ ಹೇಳಿಕೊಳ್ಳಬೇಡಿ. ಇತರರು ನಿಮನ್ನು ದುರುಪಯೋಗಪಡಿಸಿಕೊಳ್ಳುವ ಸಾಧ್ಯತೆಗಳಿರುತ್ತವೆ. ಅರವತ್ತು ವರ್ಷವಾದರೂ ಹೆಣ್ಣು ಜಾಗೃತಳಾಗಿಯೇ ಇರಬೇಕು. ಶ್ರದ್ಧೆ ಶಿಸ್ತನ್ನು ರೂಢಿಸಿಕೊಂಡಲ್ಲಿ ಎಲ್ಲಿದ್ದರೂ ಉತ್ತಮ ಭವಿಷ್ಯ ರೂಪಿಸಿಕೊಳ್ಳಬಹುದು" ಎಂದು.

ಅವರದು ನೇರ ನಡೆನುಡಿಯ, ಸರಳ ಸಜ್ಜನಿಕೆಯ ವ್ಯಕ್ತಿತ್ವ. ಉದ್ಯೋಗಸ್ಥ ಮಹಿಳೆಯರಿಗೆ ವಸತಿ ಗೃಹ, ವೃದ್ಧರಿಗೆ ವೃದ್ಧಾಶ್ರಮ ಸ್ಥಾಪಿಸುವ ಆಶೋತ್ತರಗಳಿದ್ದವು ಅವರಿಗೆ, ತಮ್ಮ ಧ್ಯೇಯಗಳಲ್ಲಿ ಕೆಲವನ್ನಾದರೂ ಸಾಧಿಸಿದ ಧೀಮಂತ ಮಹಿಳೆ, ಕರ್ತವ್ಯವೂ ನಿಷ್ಠೆಯಿಂದ ವಿವಿಧ ಸಾಮರ್ಥ್ಯಗಳಲ್ಲಿ ಸಮಾಜಕ್ಕೆ ಸೇವೆ ಸಲ್ಲಿಸಿ 25-4-93 ರಂದು ನಮ್ಮನ್ನಗಲಿದ ಅವರು, ಮಹಿಳೆಯರಿಗೆ ಮಾರ್ಗದರ್ಶಿ ಸ್ಫೂರ್ತಿಯ ನೆಲೆ. ಮೂಲತಃ ದಕ್ಷಿಣ ಕನ್ನಡದ ಕುಂದಾಪುರದವರಾದ ಆನಂದಿಬಾಯಿ ಅವರು ಮೈಸೂರನ್ನು ತಮ್ಮ ಕಾರ್ಯಕ್ಷೇತ್ರವನ್ನಾಗಿಸಿಕೊಂಡು 'ಮೈಸೂರಿನ ಮದರ್ ಥೆರೆಸಾ' ಎಂದು ಕರೆಯಲ್ಪಡುತ್ತಿದ್ದರು. ಅವರು ತುಂಬು ಜೀವನ (81ವರ್ಷ) ನಡೆಸಿದವರಾಗಿದ್ದು, ಈ ಶತಮಾನದ ಅಪರೂಪದ ವ್ಯಕ್ತಿಗಳಲ್ಲಿ ಒಬ್ಬರು.

---

## "ನೀ ಕೊಟ್ಟ ಬಹುಮಾನ."

"ನಿನ್ನ ಸನಿಹ ಬರಲು ಹೋಗಿ,
ನಾನ್ನೆಲ್ಲರಿಂದ ದೂರಾದೆ.
ನಿನ್ನೊಳಗಿನ ನಿನ್ನರಿಯುವಷ್ಟರಲ್ಲಿ,
ನನಗೂ ನಾ ಬೇಡವಾದೆ.
ಪ್ರೀತಿಯೊಂದು ಭ್ರಮೆಯಾಗಿ ಕಟುಸತ್ಯ,
ಬಯಲಾಗಿ ನಾನೊಂದು ಹೆಣ್ಣಾದೆ.
ಬದುಕ್ಕೊಂದು ನಿಟ್ಟುಸಿರಾಗಿ ಕನಸೆಲ್ಲ ಹವೆಯಾಗಿ,
ಮುಂದೊಂದು ಹೆಜ್ಜೆ ಸಾಗದಾದೆ.
ನೆನಪುಗಳ ಸುಳಿಯಲ್ಲಿ, ಭವಿಷ್ಯದ ಕತ್ತಲಲ್ಲಿ,
ನೂಕಿದ ನಿನ್ನ ನಾ ಮರೆಯದೆ ಹೋದೆ."

**ಹಸಿನಾ ಗ. ಗುಡಿ.**

# ಸಮಸ್ಯೆಗಳ ಸುಳಿಯಲ್ಲಿ ಮಹಿಳೆ

—ವಿ. ಅನಿತಕುಮಾರಿ, ಚಿಂತಾಮಣಿ

'ಹೆಣ್ಣು ಮತ್ತು ಸಮಸ್ಯೆ' ಇವೆರಡೂ ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಹೆಣ್ಣಿದ್ದಲ್ಲಿ ಸಮಸ್ಯೆ, ಸಮಸ್ಯೆಯಿದ್ದಲ್ಲಿ ಹೆಣ್ಣು ಇರಲೇ ಬೇಕೆನ್ನುವಷ್ಟರ ಮಟ್ಟಿನದು ಈ ಸಂಬಂಧ. ಹಿಂದೆ ಒಂದು ಕಾಲದಲ್ಲಿ ನಾಲ್ಕು ಗೋಡೆಗಳ ಮಧ್ಯೆ ಬಂಧಿಯಾಗಿ, ಹೊರಗಿನ ಪ್ರಪಂಚದ ಗಂಧವರಿಯದೇ, ಮನೆಯ ಒಳಗನ್ನೇ ತನ್ನ ಪ್ರಪಂಚವಾಗಿಸಿಕೊಂಡ ಮಹಿಳೆ ಅಂದು ಕೂಡ ಸಮಸ್ಯೆಗಳ ಸುಳಿಯಲ್ಲಿ ಸಿಕ್ಕು ಒದ್ದಾಡುತ್ತಿದ್ದಳು. ತನ್ನ ಮುಗ್ಧತೆ-ಅಮಾಯಕತ್ವದಿಂದಾಗಿ ಪುರುಷ ಪ್ರಧಾನ ಸಮಾಜದಲ್ಲಿ ಶೋಷಣೆಗೆ ಒಳಗಾಗುತ್ತಾ, ದಿನನಿತ್ಯ ಸತ್ತು-ಬದುಕುತ್ತಿದ್ದ ಮಹಿಳೆಯರು ಅದೆಷ್ಟೊ?

ಕವಿಯತ್ರಿ ಸಂಚಿ ಹೊನ್ನಮ್ಮನ "ಹೆಣ್ಣು ಹೆಣ್ಣೆಂದೇಕೆ ಬೀಳಗಳೆವರು ಕಣ್ಣು ಕಾಣದ ಗಾವಿಲರು..." ಕವನದ ಸಾಲುಗಳನ್ನು ಓದಿದಾಗ ಹೆಣ್ಣಿನ ಶೋಷಣೆಯ ಸ್ವರೂಪ ಎಷ್ಟರ ಮಟ್ಟಿನದೆಂಬ ಅರಿವಾಗುತ್ತದೆ ಹಿಂದೆ ಅನಕ್ಷರಸ್ಥ ಅಮಾಯಕ ಮಹಿಳೆಯರು ಕಷ್ಟಗಳಿಗೆ ಬಲಿಯಾಗುತ್ತಿದ್ದುದು ಸಹಜ. ಆದರೆ ಈಗಲೂ ಶೈಕ್ಷಣಿಕ ಕ್ಷೇತ್ರದಿಂದ ಹಿಡಿದು, ಸಮಾಜದ ಎಲ್ಲಾ ರಂಗಗಳಲ್ಲಿಯೂ ಪುರುಷರಿಗೆ ಸಮನಾಗಿ ಅಥವಾ ಅದಕ್ಕಿಂತಲೂ ಒಂದು ಹೆಜ್ಜೆ ಮುಂದೆ ಹೋಗಿ ಸಾಧನೆಗೈದಿರುವ-ಗೈಯುತ್ತಿರುವ ಸ್ತ್ರೀಯರೂ ಕೂಡ ಸಮಸ್ಯೆಗಳಿಂದ ಮುಕ್ತರಾಗಿಲ್ಲ. ಅದರಲ್ಲೂ ವಿದ್ಯಾವಂತರೆನಿಸಿಕೊಂಡು ಗೃಹಿಣಿಯಾಗಿ ಮಾತ್ರ ಏಕಪ್ರಕಾರದ ಕಾರ್ಯ ನಿರ್ವಹಿಸುತ್ತಿರುವ ಮಹಿಳೆಯರಿಗಿಂತಲೂ, ಉದ್ಯೋಗಸ್ಥ ಮಹಿಳೆಯರ ಸಮಸ್ಯೆಗಳು ತೀವ್ರ ಸ್ವರೂಪದ್ದು.

ಹೆಣ್ಣು ತಾನು ಪುರುಷರೊಂದಿಗೆ ಸರಿಸಮವಾಗಿ ನಿಲ್ಲಲು ಕಂಡುಕೊಂಡ ದಾರಿ ಆರ್ಥಿಕ ಸ್ವಾತಂತ್ರ್ಯ. ಈ ಕಾರಣದಿಂದಲೇ ಇಂದು ಮಹಿಳೆ ಎರಡೆರಡು ಜವಾಬ್ದಾರಿಗಳ ಹೊರ ಹೊತ್ತಿದ್ದಾಳೆ. ಮನೆಯೊಳಗೆ ಸದ್ಗುಣಿ ಗೃಹಿಣಿಯಾಗಿ, ತನ್ನ ಮಕ್ಕಳಿಗೆ ತಾಯಾಗಿ, ಜೀವ ತೇಯುವ ಮಹಿಳೆ, ಹೊರಗಡೆ ತನ್ನ ಕೆಲಸದಲ್ಲಿ ನಿಷ್ಠೆ ಪ್ರಾಮಾಣಿಕತೆಯಿಂದಾಗಿ ಅಲ್ಲೂ ಸಮರ್ಥಳೆನಿಸಿಕೊಂಡಿದ್ದಾಳೆ.

ಆದರೆ ಎಷ್ಟೇ ಸಮರ್ಥನೀಯವಾಗಿ ಎರಡೂ ಕೆಲಸಗಳನ್ನು ಜೊತೆ-ಜೊತೆಯಾಗಿ ನಿರ್ವಹಿಸಿಕೊಂಡು ಹೋದರೂ, ಅವಳಿಗೆ ಸಮಸ್ಯೆಗಳೊಂದಿಗೆ ಹೋರಾಡುವುದು ತಪ್ಪಿಲ್ಲ. ಹೊರಗಡೆಯಿಂದ ದುಡಿದು ಬರುವ ಗಂಡಸಿಗಾದರೆ, ಪತ್ನಿಯ ನಗುಮುಖದೊಂದಿಗಿನ ಉಪಚಾರ ತಂಪನ್ನೀಯಬಹುದು. ಆದರೆ ಅದೆಷ್ಟೋ ಮಹಿಳೆಯರು ಹೊರಗಡೆ ದುಡಿದು ಆಯಾಸದಿಂದ ಮನೆ ಹೊಕ್ಕಿ, ಯಾರಾದರೂ ಒಂದು ಲೋಟ ಕಾಫಿ ಕೊಟ್ಟರೆ ಹಾಯೆನಿಸುವಾಗ ಸ್ವತಃ ತಾನೇ ಮಾಡಿಕೊಳ್ಳಬೇಕೆಂಬ ಅರಿವು ಅವಳಿಗಾದಾಗ, ಅವಳ ಆಗಿನ ಸ್ಥಿತಿ ಹೇಗಿರಬೇಡ?

ಉದ್ಯೋಗಸ್ಥ ಮಹಿಳೆಯೆಂದರೆ ತನ್ನ ಸಹೋದ್ಯೋಗಿಗಳೊಂದಿಗೆ ಮಾತಾಡಬೇಕಾದುದು, ಅವರೊಡನೆ ಕೂಡಿ ಕೆಲಸ ಮಾಡಬೇಕಾದುದು ಅನಿವಾರ್ಯ. ಆದರೆ 'ಸ್ತ್ರೀ' ತನ್ನ ಪುರುಷ ಸಹೋದ್ಯೋಗಿಗಳೊಡನೆ ಸ್ವಲ್ಪ ಸರಾಗವಾಗಿ ಬೆರೆತಳೆಂದರೇ ಸಾಕು. ಬಹುತೇಕ ಅವಳು ಸಮಾಜದ ಕಾಕದೃಷ್ಟಿಗೆ ಬಲಿಯಾದಂತೆಯೇ, ಹತ್ತು-ಹಲವರ ಅನುಮಾನ ಕಟು ಟೀಕೆಗಳಿಗೆ ಆಕೆ ಆಹಾರವಾಗುತ್ತಾಳೆ. ಜೊತೆಗೆ ಮನೆಯವರ ಸಂಶಯಕ್ಕೂ ಒಳಗಾದಳೆಂದರೆ ಅಂತಹ ಹೆಣ್ಣಿನ ಸ್ಥಿತಿ ನಮ್ಮ ಶತ್ರುಗಳಿಗೂ ಬೇಡವೆನ್ನುವಷ್ಟು ಅಸಹನೀಯ.

ಇಂತಹ ಅನೇಕ ಕಷ್ಟ-ಕೋಟಲೆಗಳ ಮಧ್ಯೆ ಸಿಕ್ಕಿ ದೈಹಿಕ ಮತ್ತು ಮಾನಸಿಕವಾಗಿ ನರಳುತ್ತಿದ್ದರೂ,ಇಷ್ಟೆಲ್ಲಾ ತೊಂದರೆಗಳ ಮಧ್ಯೆಯೂ ತನ್ನನ್ನು ಸಮರ್ಥವಾಗಿ ತೊಡಗಿಸಿಕೊಂಡಿರುವ ಮಹಿಳೆ ನಿಜಕ್ಕೂ ಅಭಿನಂದಾರ್ಹಳು ಆದರೆ ಇಷ್ಟೆಲ್ಲಾ ಹೆಣ್ಣು ಮುಂದುವರೆದರೂ, ಸಮಾನತೆ ಪಡೆಯದಿರಲು ಕಾರಣ, ನಮ್ಮ ಮಹಿಳೆಯರಲ್ಲೇ ತಮ್ಮ ಬಗ್ಗೆ ಇರುವ ಕೀಳರಿಮೆ. ಇಂತಹ ಭಾವನೆ ನಮ್ಮಿಂದ ಸಂಪೂರ್ಣವಾಗಿ ತೊಲಗುವವರೆಗೂ ನಾವು ಪೂರ್ಣರೀತಿಯಲ್ಲಿ ನಮ್ಮ ಸಮಸ್ಯೆಗಳಿಂದ ಮುಕ್ತರಾಗಲು ಸಾಧ್ಯವೇ ಇಲ್ಲ ಅಲ್ಲವೇ? ●

# ಸುದ್ದಿ ಸಂಕಲನ

## ಸ್ವಾಯತ್ತ ಮಹಿಳೆಯರ ರಾಜಕೀಯ ನಿಲುವಿಗೆ ಒಂದು ನಿದರ್ಶನ

ಕರ್ನಾಟಕದಲ್ಲಿ ವಿಪುಲವಾದ ಚರ್ಚೆಗೆ ಗ್ರಾಸವಾದ ಹಾಗೂ ಯಾವುದೇ ಬದಲಾವಣೆಯನ್ನು ತರಬಯಸುವ ಆಡಳಿತ ಪಕ್ಷ, ತನ್ನ ಪಕ್ಷದ ಹಿತಾಸಕ್ತಿಯ ರಕ್ಷಣೆಯ ಸೀಮಿತ ದೃಷ್ಟಿಕೋನವನ್ನು ಮೀರುವುದಿಲ್ಲವೆಂಬುದಕ್ಕೆ ಉತ್ತಮ ನಿದರ್ಶನ ಜಿಲ್ಲಾ ಪಂಚಾಯತ್ ವಿದೇಯಕ.

ಜನರಿಂದ ಆಯ್ಕೆಯಾಗಿ ಜನರ ನಿಜವಾದ ಪ್ರತಿನಿಧಿಯಾಗ ಬಹುದಾಗಿದ್ದ ಪಂಚಾಯತ್‌ಗಳ ಅಧಿಕಾರವನ್ನು ಸರ್ಕಾರಿ ಅಧಿಕಾರಿಶಾಹಿಗಳ ಕೈಗೆ ನೀಡುವ ಹುನ್ನಾರವನ್ನು ರಾಷ್ಟ್ರೀಯ ಮಹಿಳಾ ನಿಯೋಗದ ಅಧ್ಯಕ್ಷೆಯಾದ ಜಯಂತಿ ಪಟ್ನಾಯಿಕ್ ಮಹಿಳಾ ಅಧ್ಯಯನದ ಭಾರತೀಯ ಸಂಘಟನೆಯ ದೇವಕಿ ಜೈನ್, ದೆಹಲಿ ವಿಶ್ವವಿದ್ಯಾನಿಲಯದ ಮಹಿಳಾ ಅಭಿವೃದ್ಧಿ ಮತ್ತು ಅಧ್ಯಯನ ಕೇಂದ್ರದ ಸುಶೀಲಾ ಕೌಶಿಕ್ ಉಗ್ರವಾಗಿ ಟೀಕಿಸಿರುವುದು ಮಹಿಳೆಯರು ಹಾಗೂ ಮಹಿಳಾ ಸಂಘಟನೆಗಳು ಬೆಳೆಸಿಕೊಳ್ಳಬೇಕಾದ ರಾಜಕೀಯ ಪ್ರಜ್ಞೆಗೆ ಒಂದು ಉತ್ತಮ ನಿದರ್ಶನ.

ವಿಧೇಯಕದಲ್ಲಿ ಸೂಚಿಸಿರುವ ತಿದ್ದುಪಡಿಗಳು ಜನರಿಂದ ಆಯ್ಕೆಯಾಗುವ ಪ್ರತಿನಿಧಿಗಳ ಅಧಿಕಾರವನ್ನು ಕಿತ್ತುಕೊಂಡು ಅವರನ್ನು ಸಂಪೂರ್ಣವಾಗಿ ನೌಕರಶಾಹಿಗೆ ನೀಡುವುದು ಪ್ರಜಾಸಕ್ತಿಯಲ್ಲಿ ಮೂಲಭೂತವಾದ ವಿಕೇಂದ್ರೀಕರಣ ತತ್ವವನ್ನು ಸಂಪೂರ್ಣವಾಗಿ ಧಿಕ್ಕರಿಸಿ ಅವುಗಳನ್ನು ಪಕ್ಷದ ರಾಜಕಾರಣಕ್ಕೆ ದಾಳಗಳನ್ನಾಗಿ ಮಾಡಿಕೊಳ್ಳುವ ಸರಕಾರದ ಯತ್ನವನ್ನು ಪ್ರಜಾಪ್ರಭುತ್ವದ ವಿರೋಧಿ ನೀತಿಯೆಂದು ಖಂಡಿಸಿದ್ದಾರೆ.

ತಿದ್ದುಪಡಿಯಲ್ಲಿ ಸೂಚಿಸಿರುವ ಬಹುಪಾಲು ಅಂಶಗಳನ್ನು ವಿವರವಾಗಿ ಪರಿಶೀಲಿಸಿದರೆ ತಿದ್ದುಪಡಿ ವಿಧೇಯಕದ ಹಿಂದಿರುವ ಉದ್ದೇಶ ಸ್ಪಷ್ಟವಾಗುತ್ತದೆ. ಮೇಲು ನೋಟಕ್ಕೆ ಅಧಿಕಾರ ಜನರ ಪ್ರತಿನಿಧಿಗಳ ಬಳಿ ಇದೆಯೆಂದೆನಿಸಿದರೂ, ಸಂಪೂರ್ಣವಾದ ಅಧಿಕಾರವನ್ನು ಅಧಿಕಾರಿಗಳಿಗೆ ನೀಡಿರುವುದು ಸ್ಪಷ್ಟ.

ಪಂಚಾಯತ್ ರಾಜ್ಯ ವ್ಯವಸ್ಥೆಯಲ್ಲಿ ಮಹಿಳೆಯರಿಗೆ ಶೇಕಡಾ 33ರಷ್ಟು ಸ್ಥಾನವನ್ನು ಕಾದಿರಿಸುವ ಸಂವಿಧಾನದ 72ನೇ ತಿದ್ದುಪಡಿಯು ಮೇಲು ನೋಟಕ್ಕೆ ಆಶಾದಾಯಕ ಹಾಗೂ ಮಹಿಳೆಯರಿಗೆ, ಅದರಲ್ಲೂ ಗ್ರಾಮೀಣ ಮಹಿಳೆಯರಿಗೆ ಅವಕಾಶವನ್ನು ಒದಗಿಸಿಕೊಡುತ್ತಿದೆ ಎಂದು ಕಂಡರೂ, ಪಕ್ಷ ರಾಜಕಾರಣಕ್ಕಾಗಿ ಮಹಿಳೆಯರನ್ನು ಉಪಯೋಗಿಸಿಕೊಳ್ಳುವುದರ ಬಗ್ಗೆ ಮಹಿಳೆಯರು ಎಚ್ಚರಿಕೆಯಿಂದ ಇರಬೇಕೆಂದು ಇವರು ಎಚ್ಚರಿಕೆ ನೀಡುತ್ತಾರೆ. ಜೊತೆಗೆ ಕರ್ನಾಟಕ ಸರ್ಕಾರದ ಈ ಕ್ರಮವನ್ನು ಒಕ್ಕೊರಲಿನಿಂದ ಪ್ರಶ್ನಿಸಿದ್ದಾರೆ.

* * *

### ಆದಿವಾಸಿ ಸಲಹೆಗಾರ್ತಿ

ಅನಕ್ಷರಸ್ಥ ಆದಿವಾಸಿ ಸ್ತ್ರೀಯರ ಜೀವನದ ಕ್ರೂರ, ಅವಮಾನುಷ ಭವಣೆಯಿಂದ ಪ್ರಭಾವಿತರಾದ ಒರಿಸ್ಸಾದ ಮುಖ್ಯಮಂತ್ರಿ ಬಿಜುಪಟ್ನಾಯಿಕ್‌ರವರು ಆದಿವಾಸಿ ಸ್ತ್ರೀಯೊಬ್ಬಳನ್ನು ತಮ್ಮ ಸಲಹೆಗಾರರಲ್ಲೊಬ್ಬಳನ್ನಾಗಿ ನೇಮಕ ಮಾಡಿಕೊಂಡಿದ್ದಾರೆ.

ಕಲಹಂಡಿ ಜಿಲ್ಲೆಯ ಕೆಲವು ಆದಿವಾಸಿ ಸ್ತ್ರೀಯರು ಮುಖ್ಯಮಂತ್ರಿಯವರನ್ನು ಭೇಟಿಯಾಗಿ, ಆದಿವಾಸಿ ಸ್ತ್ರೀಯರು ಹೇಗೆ ಮನೆಯ ಹೊರಗೆ ಕಂಟ್ರಾಕ್ಟರುಗಳಿಂದ ಹಾಗೂ ಮನೆಯೊಳಗೆ ತಮ್ಮ ಗಂಡಂದಿರಿಂದ ಅಮಾನುಷವಾದ ಕ್ರೌರ್ಯವನ್ನು, ಹಿಂಸೆಯನ್ನು ಅನುಭವಿಸುತ್ತಿದ್ದಾರೆಂದು ವಿಷದವಾಗಿ ವಿವರಿಸಿದ್ದರು.

ಭೂಮಿಯ ಎಲ್ಲಾ ಹಕ್ಕುಪತ್ರಗಳು ಕುಟುಂಬದ ಗಂಡಸರ ಹೆಸರಿನಲ್ಲಿರುವುದರಿಂದ ಹೆಂಡತಿ ಮಕ್ಕಳ ಭವಿಷ್ಯವನ್ನು ನಿರ್ಲಕ್ಷಿಸಿ, ಅವರು ಭೂಮಿಯನ್ನು ಮಾರಿ ಅನಾಥರನ್ನಾಗಿಸುವುದರಿಂದ ಪುರುಷರ ಹೆಸರಿನಲ್ಲಿ ನೀಡುವ ಈ ಒಡೆತನದ ಪದ್ಧತಿಯನ್ನು ಬದಲಾಯಿಸಿ ಸ್ತ್ರೀಯರ ಹೆಸರಿಗೆ ಒಡೆತನ ನೀಡಬೇಕೆಂದು ಒತ್ತಾಯಿಸಿದ್ದರು. ಆದಿವಾಸಿ ಮಹಿಳೆಯರ ಸಮಸ್ಯೆಗಳ ಬಗ್ಗೆ ಅವರ ಅಭಿಪ್ರಾಯಗಳನ್ನು ಪಡೆಯಲು ಮುಖ್ಯಮಂತ್ರಿಯವರು ಆದೇಶವನ್ನು ನೀಡಿದ್ದಾರೆ.

REGD NO. KRNA 271

## ಮಾನಸ

ಮಹಿಳೆಯರ ಮೇಲೆ ನಡೆಯುವ ಅಮಾನವೀಯ ದೌರ್ಜನ್ಯ, ಹಿಂಸೆಗಳನ್ನು ಬೆಳಕಿಗೆ ತರುವುದಕ್ಕಾಗಿ.

ಶೋಷಿತ ವ್ಯವಸ್ಥೆಯನ್ನು, ಅದರ ವಿವಿಧ ರೂಪಗಳನ್ನು ಗುರುತಿಸುವುದಕ್ಕಾಗಿ.

ಮಹಿಳೆಯರೊಂದಿಗೆ ಆತ್ಮೀಯ ಅರ್ಥಪೂರ್ಣ ಸಂವಾದಕ್ಕಾಗಿ.

ಮಹಿಳಾ ಆಂದೋಲನದ ಹೊಸ ದಿಕ್ಕುಗಳ ಹುಡುಕಾಟಕ್ಕಾಗಿ.

ವಿಳಾಸ :
" ಮಾ ನ ಸ "
ಪಂಚಾಯಿತಿ ರಸ್ತೆ,
ಕಾಡುಗೋಡಿ
ಬೆಂಗಳೂರು-560 067